WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**


| ಸಂಪುಟ ೧೪೭ | ಬೆಂಗಳೂರು, ಗುರುವಾರ, ಜನವರಿ ೧೨, ೨೦೧೨ (ಪುಷ್ಯ ೨೨, ಶಕ ವರ್ಷ ೧೯೩೩) | ಸಂಚಿಕೆ ೨ |
|---|---|---|


## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಶಿಕ್ಷಣ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ : ಇಡಿ 16 ಟಿಪಿಯು 2011, ಬೆಂಗಳೂರು, ದಿನಾಂಕ : 03ನೇ ನವೆಂಬರ್ 2011**

ಸರ್ಕಾರದ ಆದೇಶ ಸಂಖ್ಯೆ : ಇಡಿ 16 ಟಿಪಿಯು 2011 ದಿನಾಂಕ : 30–09–2011ರಲ್ಲಿ ಆದೇಶ ಭಾಗದ ಕಂಡಿಕೆ : 7 ರಲ್ಲಿ "ಖಾಸಗಿ ಅನುದಾನರಹಿತ" ಎಂಬುದನ್ನು "ಖಾಸಗಿ ಅನುದಾನಿತ" ಎಂದು ಮತ್ತು ಅನುಬಂಧ–2ರಲ್ಲಿನ ಕ್ರಮ ಸಂಖ್ಯೆ ಅಂಕಣದಲ್ಲಿ "40" ಎಂದಿರುವುದನ್ನು "39" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಮತ್ತು

ಸದರಿ ಆದೇಶಕ್ಕೆ ಅನುಬಂಧಿಸಲಾದ ಅನುಬಂಧ–2 ರಲ್ಲಿನ

| ಕ್ರಮ ಸಂಖ್ಯೆ | ಮಾನದಂಡ | ಗರಿಷ್ಠ ಅಂಕಗಳು |
|---|---|---|

ಹಾಗೂ

| | | |
|---|---|---|
| 39. | ಜಿಲ್ಲಾ ಪರಿಶೀಲನಾ ಸಮಿತಿಯ ಸ್ಪಷ್ಟ ಅಭಿಪ್ರಾಯ/ಶಿಫಾರಸ್ಸು, (ಪರಿಶೀಲಿಸಬಹುದು, ಪರಿಗಣಿಸಬಹುದು, ಆದೇಶಕ್ಕಾಗಿ, ಮುಂದಿನ ಕ್ರಮಕ್ಕಾಗಿ ಎಂದು ಬರೆಯದೇ, ಸ್ಪಷ್ಟವಾಗಿ ಶಿಫಾರಸ್ಸು ಮಾಡಿದೆ. ಶಿಫಾರಸ್ಸು ಮಾಡಿಲ್ಲ ಎಂದು ನಮೂದಿಸಬೇಕು) | |

ಮೇಲಿನ ಪಂಕ್ತಿಗಳನ್ನು ರದ್ದುಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಹೆಚ್. ಕುರಿಯವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಪದವಿ ಪೂರ್ವ)

ಪಿ.ಆರ್. 2725

### ಇಂಧನ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ : ಇಎನ್ 246 ಎನ್‌ಸಿಇ 2010, ಬೆಂಗಳೂರು, ದಿನಾಂಕ : 04ನೇ ನವೆಂಬರ್ 2011**

ಸರ್ಕಾರದ ಆದೇಶ ಸಂಖ್ಯೆ : ಇಎನ್ 246 ಎನ್‌ಸಿಇ 2010 ದಿನಾಂಕ : 25–07–2011ರ ಆದೇಶದ ಭಾಗದಲ್ಲಿ ನಮೂದಿಸಲಾಗಿರುವ

"Enhancement of wind power capacity from 77.4 MW to 216 MW"

ಎಂಬುದಕ್ಕೆ ಬದಲಾಗಿ

"Enhancement of wind power capacity from 14.4 MW to 138.6 MW"

ಎಂದು ತಿದ್ದುಪಡಿಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 2726

## ಇಂಧನ ಸಚಿವಾಲಯ

**ವಿಷಯ :** ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :**
1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಇ 14 ಪಿಎಸ್‌ಆರ್ 2002 ದಿನಾಂಕ 31–05–2002
2. ಸರ್ಕಾರಿ ಆದೇಶ ಸಂಖ್ಯೆ: ಡಿಇ 15 ಪಿಎಸ್‌ಆರ್ 2002 ದಿನಾಂಕ 19–12–2002
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 19 ಪಿಎಸ್‌ಆರ್ 2011 ದಿನಾಂಕ 29–04–2011, 10–06–2011 ಮತ್ತು 03–08–2011
4. ಕವಿಪ್ರನಿನಿ ಮತ್ತು ಎಲ್ಲಾ ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳ ಪತ್ರಸಂಖ್ಯೆ ಕೆಇಪಿಜಿಟಿ/ಕ–21ಸ–1/520–22 ದಿನಾಂಕ 07–10–2011.
5. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1540 ವೆಚ್ಚ–1/2011 ದಿನಾಂಕ: 02–11–2011

**ಪ್ರಸ್ತಾವನೆ :**

**1**. ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಸುಧಾರಣಾ (ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ (ಕವಿಪ್ರನಿನಿ) ಉದ್ಯಮಗಳು ಮತ್ತು ಅದರ ಸಿಬ್ಬಂದಿಯು ವಿದ್ಯುಚ್ಛಕ್ತಿ ವಿತರಣಾ ಮತ್ತು ಚಿಲ್ಲರೆ ಸರಬರಾಜು ಕಂಪನಿಗಳಿಗೆ ವರ್ಗಾವಣೆ) ನಿಯಮಗಳು, 2002, ನಿಯಮ 4(13)(1) ಪ್ರಕಾರ ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಸೇವೆಗಳನ್ನು ಎರಡನೇ ವರ್ಗಾವಣೆ ದಿನಾಂಕದ ಜಾರಿಗೆ ಮೊದಲು ಮತ್ತು ಕರ್ನಾಟಕ ವಿದ್ಯುತ್ ಮಂಡಳಿ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ (ಕವಿಪ್ರನಿನಿ) ನಿರ್ದಿಷ್ಟಪಡಿಸಲಾದ ಸಿಬ್ಬಂದಿಯು ಸಲ್ಲಿಸಿದ ಸೇವೆಗಳಿಗಾಗಿ ನಿವೃತ್ತಿ ವೇತನ ನಿಧಿಗಳು ಮತ್ತು ಶಾಸನ ಪ್ರದತ್ತ ಹಾಗೂ ಇತರೇ ಸಿಬ್ಬಂದಿ ಸಂಬಂಧಿತ ನಿಧಿಗಳ ಸಂಗ್ರಹಣೆಗೆ ರಾಜ್ಯ ಸರ್ಕಾರವು ಜವಾಬ್ದಾರಿಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲ ಮತ್ತು ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಎರಡನೇ ವರ್ಗಾವಣೆ ಜಾರಿಯಾದ ಆಯಾಯ ದಿನಾಂಕದಲ್ಲಿದ್ದಂತೆ ನಿಧಿ ಸಂಗ್ರಹಣೆ ಮಾಡದ ಮಟ್ಟಿಗೆ ರಾಜ್ಯ ಸರ್ಕಾರವು ಹೊಣೆಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲವೆಂದು ತಿಳಿಸಲಾಗಿದೆ.

2. ಮೇಲೆ (2) ರಲ್ಲಿ ಓದಲಾದ ಸರ್ಕಾರ ಆದೇಶದ ಪ್ರಕಾರ, ಕವಿಪ್ರನಿನಿ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ನ್ನು "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳೆಂದು" ಮರುನಾಮಕರಣ ಮಾಡಿ, Pay as You Go ಪದ್ಧತಿಯನ್ನು ಅನುಸರಿಸಿ ಕವಿಪ್ರನಿನಿ ಮತ್ತು ಎಸ್ಕಾಂಗಳ ನೌಕರರ ನಿವೃತ್ತಿ ಸೌಲಭ್ಯಗಳನ್ನು (Terminal Benefits) ಒಪ್ಪಿಗೆ ನೀಡಿದೆ.

3. 2011–12ನೇ ಸಾಲಿನ ಆಯವ್ಯಯದಲ್ಲಿ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ವಂತಿಗೆಗಾಗಿ "2801–80–101–1–13–106 (ಯೋಜನೇತರ)" ಲೆಕ್ಕಶೀರ್ಷಿಕೆಯಡಿ ರೂ. 400.00 ಕೋಟಿಗಳನ್ನು ನಿಗದಿಪಡಿಸಲಾಗಿರುತ್ತದೆ.

4. ಮೇಲೆ ಕ್ರಮಾಂಕ–(3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2011–12ನೇ ಸಾಲಿಗೆ ಮೊದಲನೇ, ಎರಡನೇ ಮತ್ತು ಮೂರನೇ ಕಂತುಗಳಲ್ಲಿ ರೂ. 100 ಕೋಟಿಗಳು, ರೂ. 50 ಕೋಟಿಗಳು ಮತ್ತು ರೂ. 50 ಕೋಟಿಗಳನ್ನು ಕ್ರಮವಾಗಿ ಬಿಡುಗಡೆ ಮಾಡಲಾಗಿರುತ್ತದೆ.

5. ಮೇಲೆ ಕ್ರಮಾಂಕ–(4)ರಲ್ಲಿ ಓದಲಾದ ಪತ್ರದಲ್ಲಿ, 2011–12 ರ ಆರ್ಥಿಕ ವರ್ಷಕ್ಕೆ ಉಳಿದ ಪಿಂಚಣಿ ಹಣ ರೂ. 200 ಕೋಟಿಗಳನ್ನು ಬಿಡುಗಡೆಗೊಳಿಸಲು ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳ ಅಧ್ಯಕ್ಷರು ಮತ್ತು ನಿರ್ದೇಶಕರು (ಹಣಕಾಸು), ಕವಿಪ್ರನಿನಿ ಸರ್ಕಾರವನ್ನು ಕೋರಿರುತ್ತಾರೆ.

6. ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿ, 2011–12ನೇ ಸಾಲಿನಲ್ಲಿ ರೂ. 100 ಕೋಟಿಗಳ ಅನುದಾನ ಬಿಡುಗಡೆ ಮಾಡಲು ಈ ಸರ್ಕಾರಿ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 19 ಪಿಎಸ್‌ಆರ್ 2011, ಬೆಂಗಳೂರು, ದಿನಾಂಕ 10–11–2011**

ಸರ್ಕಾರವು, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳಿಗೆ 2011–12ನೇ ಸಾಲಿನಲ್ಲಿ ಪಿಂಚಣಿ ವಂತಿಗೆ ರೂ. 100 ಕೋಟಿಗಳನ್ನು (ನೂರು ಕೋಟಿ ರೂ.ಗಳು ಮಾತ್ರ), ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದೆ.

ಈ ವೆಚ್ಚವನ್ನು "2801–80–101–1–13–106" ಸಹಾಯಧನ (ಯೋಜನೇತರ) ಲೆಕ್ಕ ಶೀರ್ಷಿಕೆಯಡಿ ಭರಿಸತಕ್ಕದ್ದು.

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳಿಗೆ" ಹಣ ಪಡೆದ 2 ದಿನದೊಳಗೆ ಪೂರ್ಣವಾಗಿ ಪಾವತಿಸಿ ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1540 ವೆಚ್ಚ–1/2011 ದಿನಾಂಕ: 02–11–2011ರ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

ಪಿ.ಆರ್. 2701

## ಇಂಧನ ಸಚಿವಾಲಯ

**ವಿಷಯ :** ಮೆ॥ ದಾವಣಗೆರೆ ಶುಗರ್ಸ್ ಕಂಪನಿ ಲಿಮಿಟೆಡ್ ಇವರಿಗೆ ದಾವಣಗೆರೆ ಜಿಲ್ಲೆಯ, ದಾವಣಗೆರೆ ತಾಲ್ಲೂಕಿನ, ಕುಕ್ಕವಾಡ ಗ್ರಾಮದಲ್ಲಿ ಸ್ಥಾಪಿಸಲು ಅನುಮತಿಸಲಾಗಿರುವ ಕಬ್ಬಿನ ಸಿಪ್ಪೆ ಆಧಾರಿತ ಸಹ–ವಿದ್ಯುತ್ ಯೋಜನಾ ಘಟಕದ ಎಕ್ಸ್‌ಪೋರ್ಟೆಬಲ್ ಸಾಮರ್ಥ್ಯವನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :** 1)ಸರ್ಕಾರಿ ಪತ್ರ ಸಂಖ್ಯೆ:ಡಿಇ 38 ಎನ್‌ಸಿಇ, 2001 ದಿನಾಂಕ 25–5–2001.

2) ಸರ್ಕಾರಿ ಪತ್ರ ಸಂಖ್ಯೆ:ಡಿಇ 38 ಎನ್‌ಸಿಇ, 2001 ದಿನಾಂಕ 07–11–2001.

3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/04/ಡಿಎಸ್‌ಸಿಎಲ್/2010/2952 ದಿನಾಂಕ: 20/24.9.2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಮೆ॥ ದಾವಣಗೆರೆ ಶುಗರ್ಸ್ ಕಂಪನಿ ಲಿಮಿಟೆಡ್ ಇವರಿಗೆ 24 ಮೆಗಾ ವ್ಯಾಟ್ (ಗ್ರಾಸ್) ಮತ್ತು 12 ಮೆ.ವ್ಯಾ. (ಎಕ್ಸ್‌ಪೋರ್ಟೆಬಲ್) ಸಾಮರ್ಥ್ಯದ ಸಹ–ವಿದ್ಯುತ್ ಘಟಕವನ್ನು ದಾವಣಗೆರೆ ಜಿಲ್ಲೆಯ, ದಾವಣಗೆರೆ ತಾಲ್ಲೂಕಿನ, ಕುಕ್ಕವಾಡ ಗ್ರಾಮದ ಬಳಿ ಸ್ಥಾಪಿಸಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಮೇಲ್ಕಂಡ ಯೋಜನೆಯ ಎಕ್ಸ್‌ಪೋರ್ಟೆಬಲ್ ಸಾಮರ್ಥ್ಯವನ್ನು 12 ಮೆ.ವ್ಯಾ. during season ಮತ್ತು 20 ಮೆ.ವ್ಯಾ. during off season ಎಂದು ತಿದ್ದುಪಡಿ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ದಾವಣಗೆರೆ ಶುಗರ್ಸ್ ಕಂಪನಿ ಲಿಮಿಟೆಡ್‌ರವರಿಗೆ ದಾವಣಗೆರೆ ಜಿಲ್ಲೆಯ ಕುಕ್ಕವಾಡ ಗ್ರಾಮದ ಬಳಿ ಸ್ಥಾಪಿಸಲು ಅನುಮತಿಸಲಾಗಿರುವ ಸಹ–ವಿದ್ಯುತ್ ಘಟಕವು ಮಾರ್ಚ್ 2004ರಲ್ಲಿ ಕಾರ್ಯಾರಂಭಗೊಂಡಿದ್ದು ಅಭಿವೃದ್ಧಿದಾರರ ಕೋರಿಕೆ ಮೇರೆಗೆ ಈ ಘಟಕದ ಎಕ್ಸ್‌ಪೋರ್ಟೆಬಲ್ ಸಾಮರ್ಥ್ಯವನ್ನು 22.5 ಮೆ.ವ್ಯಾ. (exportable) during off crushing season ಮತ್ತು 12 ಮೆ.ವ್ಯಾ. (exportable) during season ಎಂದು ಹೆಚ್ಚಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 398 ಎನ್‌ಸಿಇ 2011, ಬೆಂಗಳೂರು, ದಿನಾಂಕ : 09–11–2011.**

ಮೆ॥ ದಾವಣಗೆರೆ ಶುಗರ್ಸ್ ಕಂಪನಿ ಲಿಮಿಟೆಡ್ ಇವರಿಗೆ ದಾವಣಗೆರೆ ಜಿಲ್ಲೆಯ ಕುಕ್ಕವಾಡ ಗ್ರಾಮದ ಬಳಿ ಸ್ಥಾಪಿಸಲಾಗಿರುವ ಸಹ ವಿದ್ಯುತ್ ಘಟಕದ 24 ಮೆ.ವ್ಯಾ. (gross) ಸಾಮರ್ಥ್ಯದಲ್ಲಿ ಹಾಲಿ ಇರುವ 20 ಮೆ.ವ್ಯಾ. exportable during off season ಸಾಮರ್ಥ್ಯವನ್ನು 22.5 ಮೆ.ವ್ಯಾ. (exportable) during off crushing season ಗೆ ಹೆಚ್ಚಿಸಲಾಗಿದೆ. season ನಲ್ಲಿ ಹಾಲಿ ಇರುವ 12 ಮೆ.ವ್ಯಾ. (exportable) ಸಾಮರ್ಥ್ಯವು ಮುಂದುವರೆಯುತ್ತದೆ.

ಈ ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2702 ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ॥ ಪಿ6 ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಬಲ್ಲೇನಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕ್ರೆಡಲ್/06/SH-716/Ballenahalli MHS/308 ದಿನಾಂಕ: 03–24–2010 ಮತ್ತು ಕ್ರೆಡಲ್/06/ SH-716/ Ballenahalli-SHP/2011/1429 ದಿನಾಂಕ 18/20.05.2011.

2.ದಿನಾಂಕ: 27.05.2011ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಪಿ 6 ಇನರ್ಜಿ ಪ್ರೈವೇಟ್ ಲಿಮಿಟೆಡ್ ಇವರಿಗೆ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕು, ಬಲ್ಲೇನಹಳ್ಳಿ ಗ್ರಾಮದ ಪ್ರದೇಶದಲ್ಲಿ ಲೋಕಪಾವನಿ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಬಲ್ಲೇನಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ॥ ಪಿ6 ಇನರ್ಜಿ ಪ್ರೈವೇಟ್ ಲಿಮಿಟೆಡ್ ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 44 ಎನ್‌ಸಿಇ 2011, ಬೆಂಗಳೂರು, ದಿನಾಂಕ : 02–11–2011.**

ಮೆ॥ ಪಿ6 ಇನರ್ಜಿ ಪ್ರೈವೇಟ್ ಲಿಮಿಟೆಡ್ ಇವರಿಗೆ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕು, ಬಲ್ಲೇನಹಳ್ಳಿ ಗ್ರಾಮದ ಪ್ರದೇಶದಲ್ಲಿ ಲೋಕಪಾವನಿ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಬಲ್ಲೇನಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಕಂಡ ಶೆಡ್ಯೂಲ್ ಹಾಗೂ ಷರತ್ತಿಗೊಳಪಟ್ಟು ಹಂಚಿಕೆ ಮಾಡಲಾಗಿದೆ.

| Company | MHS | Locatin | MW | Weir Latitude | Weir Longitude | Power House Latitude | Power House Longitude | FRL (M) | TWL (M) | Design Head | Design Discharge (Cumecs) |
|---|---|---|---|---|---|---|---|---|---|---|---|
| M/s. P6 Energy Pvt. Ltd. | Ballenahalli | Ballenahalli village, Srirangapatna Taluk, Mandya District | 2.00 | 12°28' 27'' | 76°43' 08'' | 12°27' 28'' | 76°43' 07'' | 679.5 | 672 | 7 | 34 |

(ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

1(ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು, ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು, ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು (ಒಡಂಬಡಿಕೆಯನ್ನು ಕಡ್ಡಾಯವಾಗಿ ಕನ್ನಡದಲ್ಲಿಯೇ ಸಲ್ಲಿಸತಕ್ಕದ್ದು)

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

(ಈ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

2(ಅ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಅವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

(ಆ) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಷಿಯಲ್ ಕ್ಲೋಷರ್‌ನ್ನು ಸಾದಿಸತಕ್ಕದ್ದು

3. ಯೋಜನೆಯನ್ನು 3 ವರ್ಷದ ಅವಧಿಯೊಳಗೆ ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

4. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

5. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

6. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ 3 ವರ್ಷದ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

7. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರೂ ಸರ್ಕಾರಿ ಜಲ ವಿದ್ಯುತ್/ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

8. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

9. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

10. ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

11. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

12. ಸದರಿ ಯೋಜನೆಯನ್ನು ಅಭಿವೃದ್ಧಿದಾರರು ಕಾರ್ಯಗತ (implement) ಮಾಡದ ಹೊರತು, ವರ್ಗಾವಣೆ/ಮಾರಾಟಕ್ಕೆ ಅನುಮೋದನೆ ನೀಡಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

ಪಿ.ಆರ್. 2703

## ಇಂಧನ ಸಚಿವಾಲಯ

**ವಿಷಯ :** ಮೆ॥ ಶ್ರೀ ಸೂರ್ಯ ಚಂದ್ರ ವಿಂಡ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರಿಗೆ 3.00 ಮೆಗಾ ವ್ಯಾಟ್ ಸಾಮರ್ಥ್ಯದ ವಡೇರ್‌ಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕ್ರೆಡಲ್/06/SH-672/Vaderhalli MHS/309 ದಿನಾಂಕ: 03.01.2010 ಮತ್ತು ಕ್ರೆಡಲ್/06/SH-672/Vaderhalli MHS/2011/1498 ದಿನಾಂಕ 18/26.05.2011.

2.ದಿನಾಂಕ: 27.05.2011ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಶ್ರೀ ಸೂರ್ಯ ಚಂದ್ರ ವಿಂಡ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರಿಗೆ ರಾಮನಗರ ಜಿಲ್ಲೆಯ ಕನಕಪುರ ತಾಲ್ಲೂಕು, ವಡೇರ್‌ಹಳ್ಳಿ ಗ್ರಾಮದ ಪ್ರದೇಶದಲ್ಲಿ ಸುವರ್ಣಮುಖಿ ನದಿಗೆ ಅಡ್ಡಲಾಗಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ವಡೇರ್‌ಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ॥ ಶ್ರೀ ಸೂರ್ಯ ಚಂದ್ರ ವಿಂಡ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರಿಗೆ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 43 ಎನ್‌ಸಿಇ 2011, ಬೆಂಗಳೂರು, ದಿನಾಂಕ : 02-11-2011.**

ಮೆ॥ ಶ್ರೀ ಸೂರ್ಯ ಚಂದ್ರ ವಿಂಡ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರಿಗೆ ರಾಮನಗರ ಜಿಲ್ಲೆಯ ಕನಕಪುರ ತಾಲ್ಲೂಕು, ವಡೇರ್‌ಹಳ್ಳಿ ಗ್ರಾಮದ ಪ್ರದೇಶದಲ್ಲಿ ಸುವರ್ಣಮುಖಿ ನದಿಗೆ ಅಡ್ಡಲಾಗಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ವಡೇರ್‌ಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಕಂಡ ಶೆಡ್ಯೂಲ್ ಹಾಗೂ ಷರತ್ತಿಗೊಳಪಟ್ಟು ಹಂಚಿಕೆ ಮಾಡಲಾಗಿದೆ.

| Company | MHS | Locatin | MW | Weir Latitude | Weir Longitude | Power House Latitude | Power House Longitude | FRL (M) | TWL (M) | Design Head | Design Discharge (Cumecs) |
|---|---|---|---|---|---|---|---|---|---|---|---|
| M/s. Sri Surya Chandra Wind Energy (P) Ltd. | Vaderhalli | Vaderhalli village, Kanakapura Taluk, Ramanagar District | 3.00 | 12°38' 17'' | 77°24' 40'' | 12°37' 42'' | 77°24' 30'' | 632 | 622 | 9.8 | 36 |

(ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

1(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು, ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು, ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು (ಒಡಂಬಡಿಕೆಯನ್ನು ಕಡ್ಡಾಯವಾಗಿ ಕನ್ನಡದಲ್ಲಿಯೇ ಸಲ್ಲಿಸತಕ್ಕದ್ದು)

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

(ಈ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

2(ಅ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಅವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

(ಆ) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಷಿಯಲ್ ಕ್ಲೋಷರ್‌ನ್ನು ಸಾದಿಸತಕ್ಕದ್ದು

3. ಯೋಜನೆಯನ್ನು 3 ವರ್ಷದ ಅವಧಿಯೊಳಗೆ ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

4. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

5. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.
6. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ 3 ವರ್ಷದ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.
7. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರೂ ಸರ್ಕಾರಿ ಜಲ ವಿದ್ಯುತ್/ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.
8. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.
9. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.
10. ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.
11. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.
12. ಸದರಿ ಯೋಜನೆಯನ್ನು ಅಭಿವೃದ್ಧಿದಾರರು ಕಾರ್ಯಗತ (implement) ಮಾಡದ ಹೊರತು, ವರ್ಗಾವಣೆ/ಮಾರಾಟಕ್ಕೆ ಅನುಮೋದನೆ ನೀಡಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2704 ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ॥ ಶ್ರೀ ಐಶ್ವರ್ಯ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಹಂಚಿಕೆಯಾಗಿರುವ 10.00 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಕಾಲಾವಕಾಶವನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಇನ್ 103 ಎನ್‌ಸಿಇ 2004 ದಿನಾಂಕ 13–05–2004.

2) ಸರ್ಕಾರಿ ಆದೇಶ ಸಂಖ್ಯೆ: ಇನ್ 148 ಎನ್‌ಸಿಇ 2007 ದಿನಾಂಕ 26–05–2007.

3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 193 ಎನ್‌ಸಿಇ 2008 ದಿನಾಂಕ 21–1–2008,

4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರಸಂಖ್ಯೆ ಕೆಆರ್‌ಇಡಿ/06/ SH-149/Kandiya MHS/554 ದಿನಾಂಕ: 02/11.02.2011.

5) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರಸಂಖ್ಯೆ ಕೆಆರ್‌ಇಡಿ/06/ SH-149/Kandiya MHS/2770 ದಿನಾಂಕ: 13/19.09.2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ಶ್ರೀ ಐಶ್ವರ್ಯ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ, ಚಿಕ್ಕಮಗಳೂರು ತಾಲ್ಲೂಕಿನ, ಕಂಡ್ಯಾ ಗ್ರಾಮದ ಬಳಿ ಭದ್ರಾ ನದಿಯಿಂದ 2 ಕಿ.ಮೀ. Intake ಮತ್ತು 2 ಕಿ.ಮಿ. Tail-race canal ಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಂಡ್ಯಾ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಮೆ॥ ಶ್ರೀ ಐಶ್ವರ್ಯ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಅನುಷ್ಠಾನ ಮಾಡಲು ಮೂರು ವರ್ಷದ ಅವಧಿಗೆ ಕಾಲಾವಕಾಶವನ್ನು ವಿಸ್ತರಿಸಲಾಗಿತ್ತು

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಸಾಮರ್ಥ್ಯವನ್ನು 2.00 ಮೆಗಾ ವ್ಯಾಟ್‌ನಿಂದ 10.00 ಮೆಗಾ ವ್ಯಾಟ್‌ಗೆ ಹೆಚ್ಚಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ॥ ಶ್ರೀ ಐಶ್ವರ್ಯ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಚಿಕ್ಕಮಗಳೂರು ಜಿಲ್ಲೆಯ, ಚಿಕ್ಕಮಗಳೂರು ತಾಲ್ಲೂಕಿನ, ಕಂಡ್ಯಾ ಗ್ರಾಮದ ಬಳಿ ಭದ್ರಾ ನದಿಯಿಂದ 2 ಕಿ.ಮಿ. Intake ಮತ್ತು 2 ಕಿ.ಮಿ. Tail-race canal ಗೆ ಅಡ್ಡಲಾಗಿ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಕಂಡ್ಯಾ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ದಿನಾಂಕ: 15.10.2011 ರಿಂದ ಕಾಲಾವಕಾಶವನ್ನು ದಿನಾಂಕ 15.10.2012 ರವರೆಗೆ ವಿಸ್ತರಿಸಲು ಶಿಫಾರಸ್ಸು ಮಾಡಿರುತ್ತಾರೆ. ಸದರಿ ಯೋಜನಾ ಸ್ಥಳವು ಪಶ್ಚಿಮ ಘಟ್ಟ ಪ್ರದೇಶದಲ್ಲಿ ಬರುತ್ತಿದ್ದರೂ, ಅರಣ್ಯ ಪ್ರದೇಶವಲ್ಲ ಇದು ಸರ್ಕಾರಿ ಜಮೀನಾಗಿದ್ದು, ಕಂದಾಯ ಇಲಾಖೆಯ ವಿಭಾಗಿ ಆಯುಕ್ತರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಸದರಿ ಯೋಜನೆಯ ಇತ್ತೀಚಿನ ಪ್ರಗತಿ ವರದಿಯನ್ನು ನೀಡಿರುತ್ತಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 137 ಎನ್‌ಸಿಇ 2011, ಬೆಂಗಳೂರು, ದಿನಾಂಕ 10–11–2011**

ಮೆ॥ ಶ್ರೀ ಐಶ್ವರ್ಯ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಚಿಕ್ಕಮಗಳೂರು ಜಿಲ್ಲೆಯ, ಚಿಕ್ಕಮಗಳೂರು ತಾಲ್ಲೂಕಿನ, ಕಂಡ್ಯಾ ಗ್ರಾಮದ ಬಳಿ ಭದ್ರಾ ನದಿಯಿಂದ 2 ಕಿ.ಮಿ. Intake ಮತ್ತು 2 ಕಿ.ಮಿ. Tail-race canal ಗೆ ಅಡ್ಡಲಾಗಿ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ: 15.10.2012 ರವರೆಗೆ ವಿಸ್ತರಿಸಲಾಗಿದೆ.

ಈ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2705 ಇಂಧನ ಇಲಾಖೆ

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ
## ತಿದ್ದುಪಡಿ

**ಸಂ.: ಮಮಇ 90 ಮಭಾಬ 2011 ಬೆಂಗಳೂರು, ದಿನಾಂಕ: 02–11–2011**

ಸರ್ಕಾರದ ಆದೇಶ ಸಂ.: ಮಮಇ 84 ಮಭಾಬ 2009, ದಿನಾಂಕ: 29–03–2010ರ ಅನುಬಂಧದ ಭಾಗ–IV ರ ವಾರ್ಷಿಕ ಕ್ರಿಯಾ ಯೋಜನೆ ಮತ್ತು ಅನುದಾನ ಬಿಡುಗಡೆ ಶೀರ್ಷಿಕೆಯಡಿ 4ನೇ ಅಂಶ **"ಜಿಲ್ಲಾ ಸಮಿತಿಯು ಪ್ರತಿ ತಾಲ್ಲೂಕಿನ ಶೇಕಡ 2 ರಷ್ಟು ಪ್ರಸ್ತಾವನೆಗಳನ್ನು ಪರಿಶೀಲಿಸಿ ಜಿಲ್ಲೆಯ ಅನುದಾನದ ಬೇಡಿಕೆಯ ಪ್ರಸ್ತಾವನೆಯನ್ನು ಅಗತ್ಯ ದಾಖಲೆಗಳೊಂದಿಗೆ ಸರ್ಕಾರಕ್ಕೆ ಸಲ್ಲಿಸುತ್ತದೆ"** ಎಂಬುದರ ಬದಲಾಗಿ **"ಜಿಲ್ಲಾ ಸಮಿತಿಯು ಪ್ರತಿ ತಾಲ್ಲೂಕಿನ ಶೇಕಡ 2 ರಷ್ಟು ಪ್ರಸ್ತಾವನೆಗಳನ್ನು ಪರಿಶೀಲಿಸಿ ಜಿಲ್ಲೆಯ ಅನುದಾನದ ಬೇಡಿಕೆಯ ಪ್ರಸ್ತಾವನೆಯನ್ನು ಅಗತ್ಯ ದಾಖಲೆಗಳೊಂದಿಗೆ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರಿಗೆ ಸಲ್ಲಿಸುತ್ತದೆ" ಎಂದು ಹಾಗೂ 5ನೇ ಅಂಶದಲ್ಲಿರುವ "ಸರ್ಕಾರವು ಪರಿಶೀಲಿಸಿ ಅನುಮೋದಿತ ಕ್ರಿಯಾ ಯೋಜನೆಯೊಂದಿಗೆ ಅನುದಾನವನ್ನು ಉಪನಿರ್ದೇಶಕರಿಗೆ ಬಿಡುಗಡೆ ಮಾಡುತ್ತದೆ" ಎಂಬುದರ ಬದಲಾಗಿ "ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು ಪರಿಶೀಲಿಸಿ ಅನುಮೋದಿತ ಕ್ರಿಯಾ ಯೋಜನೆಯೊಂದಿಗೆ ಅನುದಾನವನ್ನು ಜಿಲ್ಲಾ ಉಪನಿರ್ದೇಶಕರಿಗೆ ಬಿಡುಗಡೆ ಮಾಡುವುದು"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಪಿ.ಆರ್. ನಂ. 2727 ಸರ್ಕಾರದ ಅಧೀನ ಕಾರ್ಯದರ್ಶಿ–1

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಸೆಮಿಕಂಡಕ್ಟರ್/ಚಿಪ್ ಡಿಸೈನ್ ಪರೀಕ್ಷೆಗಾಗಿ ಎಸ್‌ಟಿಪಿಐ ನಲ್ಲಿ ಸ್ಥಾಪಿಸಲಾಗುವ ಕ್ಯಾರೆಕ್ಟರೈಸೇಷನ್ ಲ್ಯಾಬ್‌ಗೆ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಮಾತಂಇ 08 ಎಂಡಿಎ 2011 ದಿನಾಂಕ: 04–07–2011.
2. ನಿರ್ದೇಶಕರು, ಮಾತಂ, ಜೈತಂ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ: ಡಿಐಟಿ/ಸಿಹೆಚ್‌ಆರ್ ಲ್ಯಾಬ್–ಎಸ್‌ಟಿಪಿಐ/634/2011–12 ದಿನಾಂಕ: 25–11–2011.
3. ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 08 ಎಂಡಿಎ 2011. ದಿನಾಂಕ: 28–11–2011.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸರ್ಕಾರವು ಎಸ್‌ಟಿಪಿಐ ಬೆಂಗಳೂರು ವತಿಯಿಂದ ಸಾಧನ ಖರೀದಿಯೊಡನೆ ಒಟ್ಟಾರೆ ರೂ. 7.20 ಕೋಟಿಗಳ ಅಂದಾಜು ವೆಚ್ಚಕ್ಕೆ ಶೇ. 50% ರಷ್ಟು ಅಂದರೆ ರೂ. 3.60 ಕೋಟಿ ಆರ್ಥಿಕ ಸಹಾಯವನ್ನು (ಬಂಡವಾಳ ವೆಚ್ಚ) ಎಸ್‌ಟಿಪಿಐ ಹೂಡಿಕೆಗೆ ಅನುಗುಣವಾಗಿ, ಅನುದಾನ ಮಾಡುವ ನಿಬಂಧನೆ ಮೇರೆಗೆ ರಾಜ್ಯ ಸರ್ಕಾರದ ವತಿಯಿಂದ ಕ್ಯಾರೆಕ್ಟರೈಸೇಷನ್ ಲ್ಯಾಬ್ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಮೇಲೆ (2)ರಲ್ಲಿ ಓದಲಾದ ನಿರ್ದೇಶಕರು, ಮಾತಂ ಜೈತಂ ನಿರ್ದೇಶನಾಲಯ, ಬೆಂಗಳೂರು, ಇವರ ಪತ್ರದಲ್ಲಿ ಸೆಮಿಕಂಡಕ್ಟರ್ ಪಾಲಿಸಿ–2010ರಲ್ಲಿ "ರಾಜ್ಯ ಸರ್ಕಾರದ ಸಹಾಯಧನವು ಖರೀದಿಯೊಡನೆ ಒಟ್ಟಾರೆ ಶೇ.50% ರಷ್ಟು ನೀಡಲಾಗುವುದೆಂದು ಬಾಕಿ ಹಣವನ್ನು ಕೈಗಾರಿಕೆ ಅಥವಾ ಪಿಪಿಪಿ ವ್ಯಾಪಾರ ಮಾದರಿಯ ಮೂಲಕ ಸಂಗ್ರಹಿಸಲಾಗುತ್ತದೆ" ಎಂದು ತಿಳಿಸಲಾಗಿದೆ. ಕ್ಯಾರೆಕ್ಟರೈಸೇಷನ್ ಲ್ಯಾಬ್ ಸ್ಥಾಪನೆಗಾಗಿ ಎಸ್‌ಟಿಪಿಐಗೆ ರೂ. 200.00 ಲಕ್ಷಗಳನ್ನು ಸೆಮಿಕಂಡಕ್ಟರ್ ಪಾಲಿಸಿ–2010ರ ಲೆಕ್ಕ ಶೀರ್ಷಿಕೆಯಲ್ಲಿ ಒದಗಿಸಲಾಗಿರುವ ರೂ. 1000.00 ಲಕ್ಷಗಳಲ್ಲಿ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸರ್ಕಾರವು ಸೆಮಿಕಂಡಕ್ಟರ್/ಚಿಪ್ ಡಿಸೈನ್ ಪರೀಕ್ಷೆಗಾಗಿ ಎಸ್‌ಟಿಪಿಐ ನಲ್ಲಿ ಸ್ಥಾಪಿಸಲಾಗುವ ಕ್ಯಾರೆಕ್ಟರೈಸೇಷನ್ ಲ್ಯಾಬ್‌ಗೆ ರೂ. 100.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ. ಉಳಿದ ರೂ. 100.00 ಲಕ್ಷಗಳನ್ನು ಎರಡನೇ ಕಂತಾಗಿ ಬಿಡುಗಡೆ ಮಾಡಲು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಮಾತಂಇ 08 ಎಂಡಿಎ 2011, ಬೆಂಗಳೂರು, ದಿನಾಂಕ: 30–11–2011**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಸೆಮಿಕಂಡಕ್ಟರ್/ಚಿಪ್ ಡಿಸೈನ್ ಪರೀಕ್ಷೆಗಾಗಿ ಎಸ್‌ಟಿಪಿಐ ನಲ್ಲಿ ಸ್ಥಾಪಿಸಲಾಗುವ ಕ್ಯಾರೆಕ್ಟರೈಸೇಷನ್ ಲ್ಯಾಬ್‌ಗೆ ಎರಡನೇ ಕಂತಾಗಿ ರೂ. 100.00 ಲಕ್ಷಗಳ (ರೂ. ನೂರು ಲಕ್ಷಗಳು ಮಾತ್ರ) ಅನುದಾನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2011–12ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ "3451–00–090–2–25 ಸೆಮಿಕಂಡಕ್ಟರ್ ಪಾಲಿಸಿ–059 (ಯೋಜನೆ)" ಇದರಡಿಯಲ್ಲಿ ಒದಗಣೆ ಮಾಡಲಾದ ಅನುದಾನದಿಂದ ಭರಿಸತಕ್ಕದ್ದು.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಈ ಅನುದಾನವನ್ನು ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಬಿಡುಗಡೆ ಮಾಡಲಾಗಿದೆ.

ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಬೆಂಗಳೂರು, ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ಕೆಬಿಟ್ಸ್ ಸಂಸ್ಥೆಗೆ ವಿತರಿಸತಕ್ಕದ್ದು.

ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್, ಇವರು ಈ ಅನುದಾನದ ಬಳಕೆಯ ಬಗ್ಗೆ ಉಪಯೋಗಿತಾ ದೃಢೀಕರಣ ಪತ್ರಗಳನ್ನು ನಿಗಧಿತ ನಮೂನೆಯಲ್ಲಿ ಪಡೆದು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರ ಮೂಲಕ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ–1 ಟಿಎಫ್‌ಪಿ 2008, ದಿನಾಂಕ: 16–05–2008ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಇ. ರಾಮಕೃಷ್ಣಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್. ನಂ. 2729

## ತೋಟಗಾರಿಕೆ ಸಚಿವಾಲಯ

**ವಿಷಯ :** ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನದಡಿಯ ಪ್ರಾದೇಶಿಕ ಅಧಿಕಾರಯುತ ಸಮಿತಿಗೆ ತೋಟಗಾರಿಕೆ ಜಂಟಿ/ಉಪ ನಿರ್ದೇಶಕರನ್ನು ಸದಸ್ಯ ಕಾರ್ಯದರ್ಶಿಗಳನ್ನಾಗಿ ನೇಮಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಕೃತೋಇ 106 ತೋಇವಿ 2007 ದಿನಾಂಕ: 09–02–2007.
2. ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ: ತೋಇ/ತೋಜಂನಿ/ಉತೋಪು/ವಿನಿ4/95/2011–12 ದಿನಾಂಕ: 31–10–2011.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. 1ರ ಆದೇಶದಲ್ಲಿ ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನದಡಿ ವಿಭಾಗೀಯ ಮಟ್ಟದಲ್ಲಿ ಪ್ರಾದೇಶಿಕ ಆಯುಕ್ತರ ಅಧ್ಯಕ್ಷತೆಯಲ್ಲಿ ಪ್ರಾದೇಶಿಕ ಅಧಿಕಾರಯುತ ಸಮಿತಿಯನ್ನು ರಚಿಸಿ ಈ ಸಮಿತಿಗೆ ಪ್ರಾದೇಶಿಕ ಕೇಂದ್ರ ಸ್ಥಾನ ಜಿಲ್ಲೆಯ ಉಸ್ತುವಾರಿ ತೋಟಗಾರಿಕೆ ಅಪರ ನಿರ್ದೇಶಕರುಗಳು/ಜಂಟಿ ನಿರ್ದೇಶಕರುಗಳು ಮತ್ತು ಬೆಂಗಳೂರು ಪ್ರಾದೇಶಿಕ ಅಧಿಕಾರಿಯುತ ಸಮಿತಿಗೆ ತೋಟಗಾರಿಕೆ ಜಂಟಿ ನಿರ್ದೇಶಕರು (ಉದ್ಯಾನವನಗಳು, ತೋಟಗಳು ಮತ್ತು ಪುಷ್ಪಾಭಿವೃದ್ಧಿ) ರವರನ್ನು ಸದಸ್ಯ ಕಾರ್ಯದರ್ಶಿಗಳಾಗಿ ನೇಮಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರ.ಸಂ. 2ರಲ್ಲಿ ಕೇಂದ್ರಸ್ಥಾನದ ಉಸ್ತುವಾರಿ ತೋಟಗಾರಿಕೆ ಅಪರ ನಿರ್ದೇಶಕರು/ಜಂಟಿ ನಿರ್ದೇಶಕರುಗಳು ಆಯಾ ವಿಭಾಗಕ್ಕೆ ಆಗಿಂದಾಗ್ಗೆ ಭೇಟಿ ನೀಡಿ ಅಲ್ಲಿನ ಉದ್ಯಾನವನಗಳು/ಅಭಿವೃದ್ಧಿಪಡಿಸಹುದಾದ ಸ್ಥಳಗಳನ್ನು ಗುರುತಿಸಿ ಉದ್ಯಾನವನಗಳನ್ನಾಗಿ ಅಭಿವೃದ್ಧಿಪಡಿಸಲು ಅಗತ್ಯ ಕ್ರಮ ಕೈಗೊಳ್ಳಲು ಕಷ್ಟಸಾಧ್ಯವಾಗಿರುವ ಹಿನ್ನೆಲೆಯಲ್ಲಿ ಸಂಬಂಧಪಟ್ಟ ಜಿಲ್ಲೆಯ ತೋಟಗಾರಿಕೆ ಉಪ ನಿರ್ದೇಶಕರುಗಳನ್ನು ಆಯಾ ವಿಭಾಗದ ಪ್ರಾದೇಶಿಕ ಅಧಿಕಾರಯುತ ಸಮಿತಿಯ ಸದಸ್ಯ ಕಾರ್ಯದರ್ಶಿಗಳನ್ನಾಗಿ ಹಾಗೂ ಬೆಂಗಳೂರು ಪ್ರಾದೇಶಿಕ ಅಧಿಕಾರಯುತ ಸಮಿತಿಗೆ ತೋಟಗಾರಿಕೆ ಜಂಟಿ ನಿರ್ದೇಶಕರು (ಉದ್ಯಾನವನಗಳು, ತೋಟಗಳು ಮತ್ತು ಪುಷ್ಪಾಭಿವೃದ್ಧಿ) ರವರನ್ನು ಸದಸ್ಯ ಕಾರ್ಯದರ್ಶಿಗಳಾಗಿ ನೇಮಿಸಿ ಆದೇಶ ಹೊರಡಿಸುವಂತೆ ತೋಟಗಾರಿಕೆ ನಿರ್ದೇಶಕರು ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ತೋಇ 520 ತೋಇವಿ 2011 ಬೆಂಗಳೂರು, ದಿನಾಂಕ: 01–12–2011**

ಪ್ರಸ್ತಾವನೆಯನ್ನು ಪರಿಶೀಲಿಸಿ ದಿನಾಂಕ: 09–02–2007ರ ಆದೇಶದಲ್ಲಿ ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನದಡಿ ರಚಿಸಿರುವ ಪ್ರಾದೇಶಿಕ ಅಧಿಕಾರಯುತ ಸಮಿತಿಯ ಸದಸ್ಯ ಕಾರ್ಯದರ್ಶಿಗಳನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡಂತೆ ನೇಮಿಸಿ ಆದೇಶ ಹೊರಡಿಸಲಾಗಿದೆ.

| ಕ್ರ.ಸಂ. | ಸಮಿತಿ | ಸದಸ್ಯ ಕಾರ್ಯದರ್ಶಿ |
|---|---|---|
| 1. | ಪ್ರಾದೇಶಿಕ ಅಧಿಕಾರಯುತ ಸಮಿತಿ, ಬೆಂಗಳೂರು ವಿಭಾಗ, ಬೆಂಗಳೂರು | ತೋಟಗಾರಿಕೆ ಜಂಟಿ ನಿರ್ದೇಶಕರು (ಉದ್ಯಾನವನಗಳು, ತೋಟಗಳು ಪುಷ್ಪಾಭಿವೃದ್ಧಿ) ಲಾಲ್‌ಬಾಗ್, ಬೆಂಗಳೂರು |
| 2. | ಪ್ರಾದೇಶಿಕ ಅಧಿಕಾರಯುತ ಸಮಿತಿ, ಮೈಸೂರು ವಿಭಾಗ, ಮೈಸೂರು | ತೋಟಗಾರಿಕೆ ಉಪ ನಿರ್ದೇಶಕರು (ಜಿಲ್ಲಾ ಪಂಚಾಯತ್) ಮೈಸೂರು |
| 3. | ಪ್ರಾದೇಶಿಕ ಅಧಿಕಾರಯುತ ಸಮಿತಿ, ಬೆಳಗಾವಿ ವಿಭಾಗ, ಬೆಳಗಾವಿ | ತೋಟಗಾರಿಕೆ ಉಪ ನಿರ್ದೇಶಕರು (ಜಿಲ್ಲಾ ಪಂಚಾಯತ್) ಬೆಳಗಾವಿ |
| 4. | ಪ್ರಾದೇಶಿಕ ಅಧಿಕಾರಯುತ ಸಮಿತಿ, ಬೆಳಗಾಂ ವಿಭಾಗ, ಗುಲ್ಬರ್ಗಾ | ತೋಟಗಾರಿಕೆ ಉಪ ನಿರ್ದೇಶಕರು (ಜಿಲ್ಲಾ ಪಂಚಾಯತ್) ಗುಲ್ಬರ್ಗಾ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಸಿ. ಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ

ಪಿ.ಆರ್. ನಂ. 2730

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಐಐಐಟಿ–ಬಿನಲ್ಲಿ ಸ್ಥಾಪಿಸಲಾಗುತ್ತಿರುವ ಫೋಕಸ್ಡ್ ಸ್ಕೂಲ್‌ಗೆ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 05 ಎಂಡಿಎ 2011, ದಿನಾಂಕ : 15–03–2011.
2. ನಿರ್ದೇಶಕರು, ಮಾತಂ, ಜೈತಂ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ : ಡಿಐಟಿ/ಪಿಎಸ್/640/ಎಫ್ ಎಸ್–ಐಐಐಟಿಬಿ/2011–12ದಿನಾಂಕ: 25–11–2011.
3. ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 05 ಎಂಡಿಎ 2011, ದಿನಾಂಕ : 28–11–2011.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸರ್ಕಾರವು ಐಐಐಟಿ–ಬೆಂಗಳೂರು ಸಂಸ್ಥೆಯಡಿಯಲ್ಲಿ ಸೆಮಿಕಾನ್ ಲ್ಯಾಬ್‌ನೊಂದಿಗೆ ಎಂಬೆಡೆಡ್ ಸಿಸ್ಟಮ್ ನಲ್ಲಿ ತರಬೇತಿ ಪಡೆಯಲು ಹಾಗೂ ಕಂಪ್ಯೂಟಿಂಗ್, ಕಮ್ಯೂನಿಕೇಷನ್, ಕಮಾಂಡ್, ಕಂಟ್ರೋಲ್ ಮತ್ತು ಇನ್‌ಫರ್ಮೇಷನ್ ಬಗ್ಗೆ

ರಿಸರ್ಚ್ ಲ್ಯಾಬ್ (C4I Lab) ಒಳಗೊಂಡಂತೆ ಫೋಕಸ್ಡ್ ಸ್ಕೂಲ್ ಸ್ಥಾಪಿಸುವ ಬಗ್ಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ ಮತ್ತು ದಿನಾಂಕ : 15–03–2011 ರಲ್ಲಿ ರೂ. 6.50 ಕೋಟಿಗಳನ್ನು ಫೋಕಸ್ಡ್ ಸ್ಕೂಲ್ ಸ್ಥಾಪನೆಗಾಗಿ ಬಿಡುಗಡೆ ಮಾಡಲಾಗಿದೆ.

ಮೇಲೆ (2) ರಲ್ಲಿ ಓದಲಾದ ನಿರ್ದೇಶಕರು, ಮಾತಂ, ಜೈತಂ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರದಲ್ಲಿ ಐಐಐಟಿಬಿ ರವರು ದಿನಾಂಕ : 25–11–2011 ರ ಪತ್ರದಲ್ಲಿ ಈ ಯೋಜನೆಗಾಗಿ ರೂ. 200.00 ಲಕ್ಷಗಳನ್ನು ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ.

ಮೇಲೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸರ್ಕಾರವು ಐಐಐಟಿ –ಬಿನಲ್ಲಿ ಸ್ಥಾಪಿಸಲಾಗಿರುವ ಫೋಕಸ್ಡ್ ಸ್ಕೂಲ್ ಗೆ ರೂ. 100.00 ಲಕ್ಷಗಳ ಅನದಾನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ. ಉಳಿದ ರೂ. 100.00 ಲಕ್ಷಗಳನ್ನು ಎರಡನೇ ಕಂತಾಗಿ ಬಿಡುಗಡೆ ಮಾಡಲು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 05 ಎಂಡಿಎ 2011, ಬೆಂಗಳೂರು, ದಿನಾಂಕ: 30 ನೇ ನವೆಂಬರ್ 2011.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಐಐಐಟಿ–ಬಿನಲ್ಲಿ ಸ್ಥಾಪಿಸಲಗುತ್ತಿರುವ ಫೋಕಸ್ಡ್ ಸ್ಕೂಲ್ ಗೆ ಎರಡನೇ ಕಂತಾಗಿ ರೂ. 100.00 ಲಕ್ಷಗಳ (ರೂ. ನೂರು ಲಕ್ಷಗಳು ಮಾತ್ರ) ಅನುದಾನವನ್ನು ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2011–12ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ "3451–00–090–2–25 ಸೆಮಿಕಂಡಕ್ಟರ್ ಪಾಲಿಸಿ–059 (ಯೋಜನೆ)" ಇದರಡಿಯಲ್ಲಿ ಒದಗಣೆ ಮಾಡಲಾದ ಅನುದಾನದಿಂದ ಭರಿಸತಕ್ಕದ್ದು.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಈ ಅನುದಾನವನ್ನು ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಬಿಡುಗಡೆ ಮಾಡಲಾಗಿದೆ.

ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ. ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ಕೆಬಿಟ್ಸ್ ಸಂಸ್ಥೆಗೆ ವಿತರಿಸತಕ್ಕದ್ದು.

ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್, ಇವರು ಈ ಅನುದಾನದ ಬಳಕೆಯ ಬಗ್ಗೆ ಉಪಯೋಗಿತಾ ದೃಢೀಕರಣ ಪತ್ರಗಳನ್ನು ನಿಗಧಿತ ನಮೂನೆಯಲ್ಲಿ ಪಡೆದು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರ ಮೂಲಕ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್ ಡಿ–1 ಟಿಎಫ್ ಪಿ 2008, ದಿನಾಂಕ: 16–05–2008 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಇ. ರಾಮಕೃಷ್ಣಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ

ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್.2731

## ಇಂಧನ ಸಚಿವಾಲಯ

**ವಿಷಯ :** M/s Guttaseema Wind Energy Company Private Limited ಇವರಿಗೆ 49.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:**

1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/08/GWECPL/2011/540 ದಿನಾಂಕ : 24–01–2011. 11–02–2011 ಮತ್ತು ಕೆಆರ್‌ಇಡಿ/08/ GWECPL–49.5 MW2011/2694 ದಿನಾಂಕ : 09/12–09–2011.
2. ದಿನಾಂಕ: 27–05–2011 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Guttaseema Wind Energy Company Private Limited ಇವರಿಗೆ ಚಿತ್ರದುರ್ಗ ಜಿಲ್ಲೆಯ ಚಿತ್ರದುರ್ಗ ತಾಲ್ಲೂಕಿನ ತುರುವನುರು ಹೋಬಳಿಯ ವಿವಿಧ ಗ್ರಾಮಗಳಲ್ಲಿ 49.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ನಡುವಳಿಯಲ್ಲಿ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s Guttaseema Wind Energy Company Private Limited ಇವರಿಗೆ ಚಿತ್ರದುರ್ಗ ಜಿಲ್ಲೆಯಲ್ಲಿ 49.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸ್ಥಳವು ಖಾಸಗಿ ಭೂಮಿಯಾಗಿದ್ದು ಹಾಗೂ ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 83 ಎನ್ ಸಿಇ 2009, ಬೆಂಗಳೂರು, ದಿನಾಂಕ:**

M/s Guttaseema Wind Energy Company Private Limited ಇವರಿಗೆ ಚಿತ್ರದುರ್ಗ ಜಿಲ್ಲೆಯ ಚಿತ್ರದುರ್ಗ ತಾಲ್ಲೂಕಿನ ತುರುವನುರು ಹೋಬಳಿಯ ವಿವಿಧ ಗ್ರಾಮಗಳಲ್ಲಿ 49.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಘಟಕದ ಸ್ಥಾಪನೆಗೆ ಈ ಕೆಳಗೆ ವಿವರಿಸಿರುವಂತೆ ಹಾಗೂ ಈ ಆದೇಶದಲ್ಲಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :–

| Sl. No. | Tope Sheet No. | Proposed capacity in MW | Tentative Sy. Nos. | Near by villages of the proposed area and district | Geographical area description the project |
|---|---|---|---|---|---|
| 1 | 57B/7 & 57B/11 | 42 MW | 131/p2, 134/10p2, 137/3, 138/5 & 136/2p1 of Thuruvanur Doddaghatta village, 339, 350/pl, 273, 273 of Haykallu village | Nuchchukunte, Belurahatti, Uparahalli, dodgatta, Chitradurga District. | The potential area covers into 2 toposheets 57B/7 and 57B/11. The area is a mixture of plateau and non plain. Further, it is earmarked in 'L' shape. The area appears to be completely plain and open scrub type and has scattered vegetation. |

| | | | | | |
|---|---|---|---|---|---|
| | | | 8 of Baggalarangavvanahalli village<br>266/p2 of Haykallu village<br>16, 28/1 EP2 of Baggalarangavvanahalli village<br>239, 241/p2, 302/p2 & 14 of haykallu village<br>307/B2, 308, 32/3, 309/B45, 310/B18, 314/p18 & 37/5 of haykallu-Pelurahatti villages | | The major portion of the area is located on the East and North of Haykallunt. The area has gentle elevation varying from 620 to 660 Mts. And the area is held in the following Geographical co-ordinates :<br>Latitude : 14$^0$ 19'5'' – 14$^0$25'0''N<br>Longitude : 76$^0$ 27'40'' – 76$^0$ 34'34''<br>E<br>Ridge peaks : 644, 626, 630 & 673m Amsl. |
| 2 | 57B/7 | 7.5 MW | 67/4, 66/3, 62/2p1, 46/1 A2 & 36/14 of Chikkappanahally village. | ,<br>Chikkappanahalli, sultanpura, Surenahalli, Chikkannanahalli, Chitradurga District. | The proposed is located on the West of NH13 and at distance of 3km from Madanaykanhalli. The area is completely plain and has scattered vegetation. Further, a stream runs on the western side of the area. The elevation of the area vary from 660 to 680 Mtrs. And the area is held in the following Geographical co-ordinates :<br>Latitude : 14$^0$19' 29'' – 14$^0$22'5''N<br>Longitude : 76$^0$ 21'6'' – 76$^0$ 22'17'' E<br>Ridge peaks : 678m Amsl. |
| | | 49.5 MW | | | |

1. ಯೋಜನೆಯನ್ನು ಆದೇಶ ಹೊರಡಿಸಿದ 3 ವರ್ಷದ ಅವಧಿಯೊಳಗೆ ಅನುಷ್ಠಾನಗೊಳಿಸತಕ್ಕದ್ದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳೊಳಗಾಗಿ ಯೋಜನಾಭಿವೃದ್ಧಿದಾರರು ರೂ. 400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು. (ಒಡಂಬಡಿಕೆಯನ್ನು ಕಡ್ಡಾಯವಾಗಿ ಕನ್ನಡದಲ್ಲಿ ಸಲ್ಲಿಸತಕ್ಕದ್ದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್‌ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿಪಡಿಸಬೇಕು.
4. ಗಾಳಿ ಚಕ್ರ ಹಚ್ ಹೈಟಿನಲ್ಲಿ ಪವನ ವೇಗದ ಅಳಗೆ ಖಾತರಿ ಪಡಿಸಲು ಕೆಳಗಿನ ಕೋಷ್ಠಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| ➢ 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| ➢ 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| ➢ 500 ಕಿ.ವ್ಯಾ.ನಿಂದ 750 ಕಿ.ವ್ಯಾ. | 12 | 1 |
| ➢ 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ / ಕಂದಾಯ / ಇಲಾಖೆಗಳ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು. ಅಭಿವೃದ್ಧಿದಾರರು ಈ ಯೋಜನೆಯನ್ನು ಖಾಸಗಿ ಜಮೀನಿನಲ್ಲಿ ಕೈಗೊಳ್ಳುತ್ತಿರುವುದರಿಂದ ಈ ಜಮೀನಿನ ಮಾಲಿಕರಿಂದ ಒಪ್ಪಿಗೆ/ಒಡಂಬಡಿಕೆಯನ್ನು ಪಡೆಯತಕ್ಕದ್ದು.
7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ನಿಯಮಾನುಸಾರ ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗುವುದು.
9. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವುದು.

10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.
11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್.ಬಿ.ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್.2732

## ಇಂಧನ ಸಚಿವಾಲಯ

**ವಿಷಯ :** ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ 5.00 ಮೆ.ವ್ಯಾ. ಸಾಮರ್ಥ್ಯದ ಸೌರ ವಿದ್ಯುತ್ ಘಟಕ ಸ್ಥಾಪಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :** 1. ಅಧಿಸೂಚನೆ ಸಂಖ್ಯೆ : ಇಎನ್ 61 ಎನ್ ಸಿಇ 2011 ದಿನಾಂಕ : 01–07–2011.
2. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಸಿಇ (ಇಐ&ಟಿಎ)ಸೌರಶಕ್ತಿ/229 ದಿನಾಂಕ: 28–07–2011

**ಪ್ರಸ್ತಾವನೆ :**

ಕರ್ನಾಟಕ ನವೀಕರಿಸಬಹುದಾದ ಇಂಧನ ನೀತಿಯಡಿಯಲ್ಲಿ ಸೌರವಿದ್ಯುತ್ತನ್ನು ಉತ್ತೇಜಿಸುವ ಮುಖ್ಯ ಉದ್ದೇಶದಿಂದ ಮೇಲೆ ಓದಲಾದ (1)ರ ಅಧಿಸೂಚನೆಯಲ್ಲಿ ಸರ್ಕಾರವು ಸೌರ ವಿದ್ಯುತ್ ನೀತಿ 2011–16ರನ್ನು ಪ್ರಕಟಿಸಿರುತ್ತದೆ. ಈ ನೀತಿಯ ನಿಯಮ (9) ಈ ಕೆಳಕಂಡಂತಿವೆ :

ಸೌರ ವಿದ್ಯುತ್ತನ್ನು ಹೊರ ರಾಜ್ಯದ ಶಾಖೋತ್ಪನ್ನ ವಿದ್ಯುತ್‌ನೊಂದಿಗೆ ಸಂಯೋಜಿಸಿ, ಕೆ.ಇ.ಆರ್.ಸಿ.ಯಿಂದ ಅನುಮೋದನೆಗೊಳಪಟ್ಟು, ಸರ್ಕಾರವು ನಿಗದಿಪಡಿಸಿದ ದರದಂತೆ ವಿದ್ಯುತ್ ನೀಡುವ ಸಲುವಾಗಿ, ಕೇಂದ್ರ ಅಥವಾ ಕರ್ನಾಟಕ ರಾಜ್ಯ ಸ್ವಾಮ್ಯಕ್ಕೊಳಪಟ್ಟ ಸಂಸ್ಥೆಗಳಿಂದ ಸ್ಥಾಪಿಸಲ್ಪಡುವ, 50 ಮೆ.ವ್ಯಾ. ಯೋಜನೆ ಸಾಮರ್ಥ್ಯವನ್ನು, ಸೌರ ವಿದ್ಯುತ್ ಘಟಕಗಳಿಗೆ ಹಂಚಿಕೆ ನೀಡುವ ಹಕ್ಕನ್ನು ಸರ್ಕಾರವು ಮೀಸಲಿರಿಸಿಕೊಂಡಿರುತ್ತದೆ. ಗರಿಷ್ಠ 50 ಮೆ.ವ್ಯಾ. ಸೌರ ಶಕ್ತಿಯನ್ನು ಈ ಕಲಮಿನಡಿ ಅನುಮೋದನೆ ನೀಡಲಾಗುತ್ತದೆ. ಕಲಂ 4ರಲ್ಲಿ ಸೂಚಿಸಿರುವ ಒಟ್ಟು ಸಾಮರ್ಥ್ಯದ 200 ಮೆ.ವ್ಯಾ.ವನ್ನು ಬಿಟ್ಟು ಇದು ಸೇರಿರುತ್ತದೆ.

ಮೇಲೆ ಓದಲಾದ (2)ರ ದಿನಾಂಕ 28–07–2011 ರ ಪತ್ರದಲ್ಲಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಹಾವೇರಿ ಜಿಲ್ಲೆ, ಶಿಗ್ಗಾಂವ್ ತಾಲ್ಲೂಕು, ಚಂದಾಪುರ ಗ್ರಾಮದ ಸರ್ವೆ ನಂ. 145, 146, 147 ರಲ್ಲಿ ಒಟ್ಟು 77 ಎಕರೆ 24 ಗುಂಟ ಸರ್ಕಾರಿ ಜಮೀನಿನಲ್ಲಿ 5.00 ಮೆ.ವ್ಯಾ. ಸಾಮರ್ಥ್ಯದ ಸೌರ ವಿದ್ಯುತ್ ಘಟಕ ನಿರ್ಮಿಸುವ ಉದ್ದೇಶ ಹೊಂದಿದ್ದು, ಈ ಸಂಬಂಧ ಈಗಾಗಲೇ ಪ್ರಕ್ರಿಯೆಗಳನ್ನು ಪ್ರಾರಂಭಿಸಿರುವುದರಿಂದ ಈ ಯೋಜನೆಗೆ ಸರ್ಕಾರದಿಂದ ಮಂಜುರಾತಿಯನ್ನು ನೀಡುವಂತೆ ಕೋರಿರುತ್ತಾರೆ.

ಸೌರ ವಿದ್ಯುತ್ ನೀತಿ 2011–16 ರ ಪ್ರಕಾರ ರಾಜ್ಯ ಸರ್ಕಾರ / ಕೇಂದ್ರ ಸರ್ಕಾರದ ನಿಗಮಗಳಿಗೆ ಅನುಮತಿ ನೀಡಲು ಅವಕಾಶ ಇರುವುದರಿಂದ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಹಾವೇರಿ ಜಿಲ್ಲೆ, ಶಿಗ್ಗಾಂವ್ ತಾಲ್ಲೂಕು, ಚಂದಾಪುರ ಗ್ರಾಮದಲ್ಲಿ 5.00 ಮೆ.ವ್ಯಾ ಸಾಮರ್ಥ್ಯದ ಸೌರ ವಿದ್ಯುತ್ ಘಟಕನ್ನು ಸ್ಥಾಪಿಸಲು ಅನುಮತಿ ನೀಡುವ ಪ್ರಸ್ತಾವನೆಯನ್ನು ಪರಿಶಿಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 465 ಎನ್‌ಸಿಇ 2010, ಬೆಂಗಳೂರು, ದಿನಾಂಕ: 29–11–2011.**

ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಹಾವೇರಿ ಜಿಲ್ಲೆ, ಶಿಗ್ಗಾಂವ್ ತಾಲ್ಲೂಕು, ಚಂದಾಪುರ ಗ್ರಾಮದ ಸರ್ವೆ ನಂ. 145, 146, 147 ರಲ್ಲಿ ಒಟ್ಟು 77 ಎಕರೆ 24 ಗುಂಟ ಸರ್ಕಾರಿ ಜಮೀನಿನಲ್ಲಿ 5.00 ಮೆ.ವ್ಯಾ ಸಾಮರ್ಥ್ಯದ ಸೌರ ವಿದ್ಯುತ್ ಘಟಕವನ್ನು ಸ್ಥಾಪಿಸಲು ಸರ್ಕಾರದ ಅನುಮತಿಯನ್ನು ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್.ಬಿ.ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್.2733

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

ವಿಷಯ : ಎಸ್‌ಜಿಎಸ್‌ವೈಯಡಿ ಮೈಸೂರು ಜಿಲ್ಲಾ ಪಂಚಾಯತಿಗೆ 2011–12 ನೇ ಸಾಲಿನ ರಾಜ್ಯದ ಪಾಲಿನ ಒಂದನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ : ಜಿ 20011/01/2011 **ಎಸ್‌ಜಿಎಸ್‌ವೈ**–I ದಿನಾಂಕ : 11–04–2011.
2. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ : ಜಿ 20011/01/2011 **ಎಸ್‌ಜಿಎಸ್‌ವೈ**–I **(9)** ದಿನಾಂಕ: 15–04–2011, (38) ದಿನಾಂಕ : 15–04–2011 ಮತ್ತು (67) ದಿನಾಂಕ : 15–04–2011.
3. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 25 ಎಸ್‌ಜೆವೈ 2010, ಬೆಂಗಳೂರು, ದಿನಾಂಕ : 03–05–2011.
4. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 13 ಎಸ್‌ಜೆವೈ 2011, ಬೆಂಗಳೂರು, ದಿನಾಂಕ : 21–06–2011.
5. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ : ಜೆ 12022/11/2010– **ಎಸ್‌ಜಿಎಸ್‌ವೈ**–I **(105) ದಿನಾಂಕ: 15–09–2011**.

**ಪ್ರಸ್ತಾವನೆ :**

ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯು (ಎಸ್‌ಜಿಎಸ್‌ವೈ) ಕೇಂದ್ರ ಪುರಸ್ಕೃತಯೋಜನೆಯಾಗಿದ್ದು, ಯೋಜನೆಯ ಮಾರ್ಗಸೂಚಿಯಂತೆ ಕೇಂದ್ರ ಮತ್ತು ರಾಜ್ಯ ಸರ್ಕಾರ ಅನುದಾನವನ್ನು 75 : 25 ರ ಅನುಪಾತದಲ್ಲಿ ಭರಿಸಬೇಕಾಗಿದೆ. ಕೇಂದ್ರ ಸರ್ಕಾರದ

ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಓದಲಾಗಿದೆ (2) ರ ಪತ್ರಗಳಲ್ಲಿ ಎಸ್‌ಜಿಎಸ್‌ವೈಯಡಿ 2011–12 ನೇ ಸಾಲಿಗೆ ರಾಜ್ಯದ ಮೈಸೂರು ಜಿಲ್ಲಾ ಪಂಚಾಯತ್ ಹೊರತುಪಡಿಸಿ ಉಳಿದ 29 ಜಿಲ್ಲೆಗಳಿಗೆ ಒಂದನೇ ಕಂತಿನ ಅನುದಾನ ಒಟ್ಟು ₹41,33,54,000 ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರ ತನ್ನ ಪಾಲಿನ ಒಂದನೇ ಕಂತಿನ ಅನುದಾನ ₹13,77,84,000 ಗಳನ್ನು ಬಿಡುಗಡೆ ಮಾಡಬೇಕಿತ್ತು. ಆದರೆ, 2010–11 ನೇ ಸಾಲಿನಲ್ಲಿ ಕೇಂದ್ರ ಸರ್ಕಾರ ಒಟ್ಟು ₹59,78,03,000 ಗಳನ್ನು ಬಿಡುಗಡೆ ಮಾಡಿದ್ದು, ಇದಕ್ಕನುಗುಣವಾಗಿ ರಾಜ್ಯ ಸರ್ಕಾರ ₹19,92,68,000 ಗಳನ್ನು ಬಿಡುಗಡೆ ಮಾಡಬೇಕಿತ್ತು. 17 ಜಿಲ್ಲಾ ಪಂಚಾಯತಿಗಳಿಗೆ 2010–11 ನೇ ಸಾಲಿನಲ್ಲಿ ರಾಜ್ಯದ ಆಯವ್ಯಯದಲ್ಲಿ ಕಾಯ್ದಿರಿಸಿದ ಅನುದಾನದ ಲಭ್ಯತೆಗನುಸಾರವಾಗಿ ₹13,37,75,000 ಗಳನ್ನು ಮಾತ್ರ ಬಿಡುಗಡೆಗೊಳಿಸಲಾಗಿತ್ತು. ಉಳಿಕೆ ₹6,54,93,000 ಗಳನ್ನು 2011–12 ನೇ ಸಾಲಿನಲ್ಲಿ ಓದಲಾಗಿದೆ (3) ರ ಆದೇಶದಲ್ಲಿ ಬಿಡುಗಡೆ ಮಾಡಲಾಗಿತ್ತು. ಆದ ಕಾರಣ, ಬೆಂಗಳೂರು ಗ್ರಾಮಾಂತರ, ಬೀದರ್, ಚಾಮರಾಜನಗರ, ಚಿಕ್ಕಬಳ್ಳಾಪುರ, ದಾವಣಗೆರೆ, ಹಾಸನ, ಕೊಡಗು, ಕೋಲಾರ, ಮಂಡ್ಯ, ರಾಮನಗರ, ತುಮಕೂರು ಮತ್ತು ಉಡುಪಿ ಜಿಲ್ಲಾ ಪಂಚಾಯತಿಗಳಿಗೆ ಅನುದಾನದ ಲಭ್ಯತೆಗೆ ಸೀಮಿತಗೊಳಿಸಿ ಹಾಗೂ ಉಳಿದ ಜಿಲ್ಲಾ ಪಂಚಾಯತಿಗಳಿಗೆ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಅನುದಾನಕ್ಕನುಗುಣವಾಗಿ ₹11,25,32,000 ಗಳನ್ನು ಓದಲಾಗಿದೆ (4) ರ ಆದೇಶದಲ್ಲಿ ಬಿಡುಗಡೆ ಮಾಡಲಾಗಿತ್ತು.

ಕೇಂದ್ರ ಸರ್ಕಾರ ಓದಲಾಗಿದೆ (5) ರ ಪತ್ರದಲ್ಲಿ ಮೈಸೂರು ಜಿಲ್ಲಾ ಪಂಚಾಯತಿಗೆ ಒಂದನೇ ಕಂತಿನ ಅನುದಾನವಾಗಿ ₹1,97,96,000 ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರ ತನ್ನ ಪಾಲಿನ ಒಂದನೆ ಕಂತಿನ ಅನುದಾನ ₹65,99,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 13 ಎಸ್‌ಜೆವೈ 2011, ಬೆಂಗಳೂರು, ದಿನಾಂಕ: 22–11–2011.**

ರಾಜ್ಯ ಸರ್ಕಾರವು, ಸ್ವರ್ಣ ಜಯಂತಿ ಗ್ರಾಮ ಸ್ವರೋಜ್ ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ಮೈಸೂರು ಜಿಲ್ಲಾ ಪಂಚಾಯತಿಗೆ 2011–12 ನೇ ಸಾಲಿನ ರಾಜ್ಯದ ಪಾಲಿನ ಒಂದನೆ ಕಂತಿನ ಅನುದಾನ ₹65,99,000 (ಅರವತ್ತೈದು ಲಕ್ಷದ ತೊಂಬತ್ತೊಂಬತ್ತು ಸಾವಿರ ₹ ಮಾತ್ರ) ಗಳನ್ನು ಅನುಬಂಧದಲ್ಲಿ ತೋರಿಸಿರುವಂತೆ ಮಂಜೂರಾತಿ ನೀಡಿ ಬಿಡುಗಡೆ ಮಾಡಿದೆ.

ಷರತ್ತುಗಳು :

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198 ಗ್ರಾಮ ಪಂಚಾಯತ್ ಗಳಿಗೆ ಸಹಾಯ–6 ಗ್ರಾಮ ಪಂಚಾಯತ್‌ಗಳು–01 ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್ ಗಾರ್ ಯೋಜನೆ) 2011–2012 ನೇ ಲಿಂಕ್ ಕೋಡ್ 2501–01–198–6–01" (ಹೊಸ ಜಿಲ್ಲಾ ಪಂಚಾಯತಿ ಕೋಡ್ 2501–01–101–0–13) ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 7 ಜೆಡ್‌ಪಿಎ 2003 ದಿನಾಂಕ 14–07–2005 ರನ್ವಯ ಖಜಾನೆಯಿಂದ ಪಡೆಯುವುದು.

ಮೈಸೂರು ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಗಳಿಗೆ ಖಜಾನೆಯಿಂದ ಅನುದಾನವನ್ನು ಸೆಳೆಯಲು ಕಾನೂನು ರೀತಿಯ ಅಧಿಕಾರ ನೀಡಲಾಗಿದೆ. ಖಜಾನೆಯಿಂದ ಅನುದಾನವನ್ನು ಪೇಯೀಸ್ ರಸೀದಿ ಮೇಲೆ ಸೆಳೆಯಲು ಆರ್ಥಿಕ ಇಲಾಖೆ (ವೆಚ್ಚ–6) ಯ ಸಂಖ್ಯೆ ಆಇ 172 ವೆಚ್ಚ–6/2011 ದಿನಾಂಕ 30–03–2011 ರಂತೆ ಸಹಮತಿಸಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿದಂತೆ ಒಟ್ಟು ಅನುದಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ : ಗ್ರಾ ಅಪ 14 ಎಸ್‌ಜೆವೈ 2007 ದಿನಾಂಕ 18–04–2007 ರ ಸೂಚನೆಯಂತೆ ಕ್ರಮ ಕೈಗೊಳ್ಳುವುದು.

ಬಿಡುಗಡೆ ಮಾಡುವ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಮಾಡುವುದು.

2011–12 ನೆ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಮೈಸೂರು ಜಿಲ್ಲಾ ಪಂಚಾಯತಿಯ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಮಾಸಿಕ ಪ್ರಗತಿ ವರದಿಯನ್ನು ಪ್ರತಿ ಮಾಹೆಯ 5 ನೇ ತಾರೀಖಿನೊಳಗೆ ಕೇಂದ್ರ ಸರ್ಕಾರದ online ಗೆ upload ಮಾಡಿ ಪ್ರತಿಯನ್ನು ಸ್ವ ಉದ್ಯೋಗ ಕಾರ್ಯಕ್ರಮಗಳ ಶಾಖೆಗೆ ತಪ್ಪದೇ ಕಳುಹಿಸುವುದು.

ಮೈಸೂರು ಜಿಲ್ಲಾ ಪಂಚಾಯಿತಿಯ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಸ್ವಉಕಾ), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ : ಗ್ರಾಅಪ 4 ಪಿಬಿಎಸ್ 2011–12 ದಿನಾಂಕ 05–11–2011 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅಮಿತಾ ಪ್ರಸಾದ್**

ಸರ್ಕಾರದ ಪ್ರಧಾನ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಸರ್ಕಾರದ ಆದೇಶದ ಸಂಖ್ಯೆ : ಗ್ರಾಅಪ 13 ಎಸ್‌ಜಿವೈ 2011, ಬೆಂಗಳೂರು, ದಿನಾಂಕ 22–11–2011ಕ್ಕೆ ಅನುಬಂಧ**

(ರೂ.ಗಳಲ್ಲಿ)

| ಕ್ರ. ಸಂ. | ಜಿಲ್ಲಾ ಪಂಚಾಯಿತಿಯ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ.ಕೋಡ್ | 2011–12ನೇ ಸಾಲಿನಲ್ಲಿ ಕೇಂದ್ರ ಸರ್ಕಾರ ಬಿಡುಗಡೆ ಒಟ್ಟು ಅನುದಾನ | ಇದಕ್ಕನುಗುಣ ವಾಗಿ ರಾಜ್ಯ ಸರ್ಕಾರವು ಬಿಡುಗಡೆ ಮಾಡ ಬೇಕಾಗಿರುವ ಅನುದಾನ | 2011–12ನೇ ಸಾಲಿನ ರಾಜ್ಯದ ಆಯವ್ಯಯ ದಲ್ಲಿ ಜಿಲ್ಲೆಗಳಿಗೆ ನಿಗದಿಪಡಿಸಿದ ಅನುದಾನ | 2010–11 ನೇ ಸಾಲಿನ ಬಾಕಿ ಅನುದಾನ ವನ್ನು 2011–12ನೇ ಸಾಲಿನ ಆಯವ್ಯಯ ದಲ್ಲಿ ಭರಿಸಿ ಬಿಡುಗಡೆ ಮಾಡಿದ ಅನುದಾನ | ಜಿಲ್ಲೆಗಳಲ್ಲಿ ಬಿಡುಗಡೆಗೆ ಲಭ್ಯವಿರುವ ಅನುದಾನ (ಕಾಲಂ 7–8) | ಅನುದಾನ ದ ಲಭ್ಯತೆಗೆ ಅನುಗುಣ ವಾಗಿ ಜಿ.ಪಂ. ಗಳಿಗೆ ಬಿಡುಗಡೆ ಮಾಡು ತ್ತಿರುವ ಅನುದಾನ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| 1 | ಮೈಸೂರು | 407 | 0900ZZ0001 | 1,97,96,000 | 65,99,000 | 1,02,00,000 | 1,20,000 | 1,00,80,000 | 65,99,000 |

ಪಿ.ಆರ್.2734

**ಅಮಿತಾ ಪ್ರಸಾದ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## FOREST, ECOLOGY AND ENVIRONMENT SECRETARIAT

**Sub:** Diversion of 0.27 ha. of forest land in Sy.No. 1167 of Maliyabad Protected Forest in Raichur Division for construction of Ground Level Service Reservoir (GLSR) in favour of the Municipal Commissioner, City Municipal Council, Raichur.

***Read:***
1. Letter No. A5(4)GFL, CR. 7/10-11, dated : 03-09-2011 of Principal Chief Conservator of Forests, Bangalore.
2. Government of India Letter No. F.No. 11-9/98-FC, dated : 16-102000, 21-11-2005, 26-12-2007, 08-04-2009 and 11-09-2009.

**PREAMBLE:**

The Principal Chief Conservator of Forests, Bangalore vide his letter dated 03-09-2011 read at (1) above has submitted the proposal for diversion of 0.27 ha. of forest land in Sy.No. 1167 of Raichur in Raichur-Maliyabad Protected Forest. Raichur Division for construction of Ground Level Service Reservoir (GLSR) in favour of the Municipal Council Raichur under the Forest (Conservation) Act, 1980, subject to certain conditions.

This proposal has been examined as per the general approval of Government of India in its letter dated : 16-10-2000, 21-11-2005, 26-12-2007, 08-04-2009 and 11-09-2009 it has been decided to accord sanction for diversion of 0.27 ha. of forest land under the Forest (Conservation) Act, 1980. The proposal has been examined in detail and hence the order.

**GOVERNMENT ORDER NO. FEE 156 FLL 2011, BANGALORE, DATED: 30-11-2011.**

In the circumstances explained in the preamble above and in accordance with the general approval given by Government of India in their letters dated : 16-10-2000, 21-11-2005, 26-12-2007, 08-04-2009 and 11-09-2009 Government is pleased to accord approval under Forest (Conservation) Act, 1980 for diversion of 0.27 ha. of forest land in Sy.No. 1167 of Raichur in Raichur-Maliyabad Protected Forest, Raichur Division for construction of Ground Level Service Reservoir (GLSR) in favour of the Municipal Council Raichur under the Forest (Conservation) Act, 1980, subject to the following conditions.

1. The legal status of the forest land shall remain unchanged and it shall continue as forest land.
2. The lease tenure is for a period of 20 (Twenty) years.
3. The lessee shall pay lease rent as fixed by the Government from time to time.
4. The leased out area should be used for the purpose for which it is granted. In case the land is not used for the stipulated purpose within one year or when it no longer needed for the stipulated purpose, the area should be resumed to the Forest Department under Section 82 of Karnataka Forest Act, 1963. The concerned Deputy Conservator of Forests is authorized to take necessary action in this regard.
5. No residential building shall be permitted in the proposed area.
6. The Karnataka Forest Act 1963 and Rules 1969 and other relevant Acts and Rules will be applicable for any violation.
7. The User Agency has to pay the Net Present Value (NPV) of forest land being diverted under this proposal as per Orders dated 28-03-2008 and 09-05-2008 of the Hon'ble Supreme Court of India.
8. The User Agency shall not sub-lease, mortgage and hypothecate the forest area
9. The User Agency shall ensure that there should be no damage caused to the surrounding flora and fauna.
10. The User Agency shall abide by all the conditions imposed upon by the Government of India, the Government of Karnataka and the Principal Chief Conservator of Forests (HoFF).

By Order and in the name of the Governor of Karnataka

**G.H. ANASUYAMMA**
Under Secretary to Government
Forest, Ecology and Environment Department.

PR No. 2735

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಗುಲ್ಬರ್ಗಾ ಜಿಲ್ಲೆ ಮತ್ತು ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಯೋಇ 309 ಪಿಟಿಪಿ 94, ದಿನಾಂಕ : 07–08–1995.

**2.** ಭಾರತೀಯ ಜನತಾ ಪಾರ್ಟಿಯ ರಾಜ್ಯಾಧ್ಯಕ್ಷರ ಪತ್ರ ಸಂ:/ರಾಕಾ/ನಾನಿ/448/2011 ದಿನಾಂಕ : 22–09–2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ : 07–08–1995ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾಗೊಳಿಸಲು ಜಿಲ್ಲಾ ಮಟ್ಟದ/ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮಾನ್ಯ ಯೋಜನಾ ಸಚಿವರ ಶಿಫಾರಸ್ಸು ಮೇರೆಗೆ ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿರುವಂತೆ ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ, ಜಿಲ್ಲೆಯ ಸೇಡಂ ತಾಲ್ಲೂಕು ಹಾಗೂ ಚಿತ್ತಾಪುರ ತಾಲ್ಲೂಕಿಗೆ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಯೋಇ 103 ಯೋವಿವಿ 2011, ಬೆಂಗಳೂರು, ದಿನಾಂಕ : 25–10–2011**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಅನುಬಂಧ–1ರಲ್ಲಿ ನಮೂದಿಸಿರುವಂತೆ ಸದಸ್ಯರುಗಳನ್ನು ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ–1&2

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

### ಅನುಬಂಧ–1

**ಗುಲ್ಬರ್ಗಾ ಜಿಲ್ಲೆ ಸೇಡಂ ತಾಲ್ಲೂಕು ಅಭ್ಯರ್ಥಿಗಳ ವಿವರ ಈ ಕೆಳಕಂಡಂತಿರುತ್ತದೆ.**

| ಕ್ರ.ಸಂ. | ಹೆಸರು ಮತ್ತು ವಿಳಾಸ<br>ಶ್ರೀ /ಶ್ರೀಮತಿ | ವರ್ಗ |
|---|---|---|
| 1. | ಶ್ರೀ ಶಿವುಕುಮಾರ ಪಾಟೀಲ ಬಿನ್ ವೀರಶೇಟಪ್ಪ ಪಾಟೀಲ ತೆಲ್ಲೂರ, ಯಲ್ಲಾಲಿಂಗ ನಿಲಯ, ವಿದ್ಯಾನಗರ, ಸೇಡಂ, ತಾ॥ ಸೇಡಂ ಜಿ॥ ಗುಲ್ಬರ್ಗಾ | ಸಾಮಾನ್ಯ |
| 2. | ಶ್ರೀ ವೀರಣ್ಣ ಬಿನ್ ಸಂಗಪ್ಪ ಮಂತಟ್ಟಿ (ಗೊಟಗಿ) ಮು॥ಪೋ॥ಕುರುಕುಂಟಾ, ತಾ॥ ಸೇಡಂ, ಜಿ॥ ಗುಲ್ಬರ್ಗಾ | ಸಾಮಾನ್ಯ |
| 3. | ಶ್ರೀ ಮಹಮ್ಮದ್ ಗೌಸ್ ಬಿನ್ ಮಹಮ್ಮದ ಶೇಖ ಅಬ್ದುಲ್ಲಾ ಮಾಸುಲ್ದಾರ, ಮಿಸ್ಕನ್‌ಪೂರ, ಸಾದೆಸಾಬ ದರ್ಗಾ ರೋಡ, ಸೇಡಂ. ತಾ॥ ಸೇಡಂ, ಜಿ॥ ಗುಲ್ಬರ್ಗಾ | ಅ.ಸಂ. |
| 4. | ಶ್ರೀ ಲಕ್ಷ್ಮಣ ಬಿನ್ ಶಿವಪ್ಪ ಮಂತ್ರಿ ಮು॥ಪೋ॥ಕೋಡ್ಲಾ, ತಾ॥ ಸೇಡಂ, ಜಿ॥ ಗುಲ್ಬರ್ಗಾ | ಎಸ್.ಸಿ |
| 5. | ಶ್ರೀಮತಿ ಗಂಗಾದೇವಿ ಕೋಂ ಬಸವರಾಜ ನಿಷ್ಠಿ ಹಳೆ ಗಂಜ ರಸ್ತೆ, ಸೇಡಂ, ತಾ॥ ಸೇಡಂ, ಜಿ॥ ಗುಲ್ಬರ್ಗಾ | ಮಹಿಳೆ |
| 6. | ಶ್ರೀ ಸುರೇಶ ಬಿನ್ ಯಮುನಯ್ಯ ಕಲಾಲ ಮು॥ಪೋ॥ಆಡಕಿ, ತಾ॥ ಸೇಡಂ, ಜಿ॥ ಗುಲ್ಬರ್ಗಾ | ಹಿಂ.ವರ್ಗ |

**ಗುಲ್ಬರ್ಗಾ ಜಿಲ್ಲೆ ಚಿತ್ತಾಪುರ ತಾಲ್ಲೂಕು ಅಭ್ಯರ್ಥಿಗಳ ವಿವರ ಈ ಕೆಳಕಂಡಂತಿರುತ್ತದೆ.**

| ಕ್ರ.ಸಂ. | ಹೆಸರು ಮತ್ತು ವಿಳಾಸ<br>ಶ್ರೀ /ಶ್ರೀಮತಿ | ವರ್ಗ |
|---|---|---|
| 1. | ಶ್ರೀ ಚನ್ನಣ್ಣ ಬಿನ್ ಸಿದ್ರಾಮಪ್ಪ ಬಾಳಿ, ರಾವೂರ | ಸಾಮಾನ್ಯ |
| 2. | ಶ್ರೀ ರಾಜಶೇಖರ ಬಿನ್ ಡೋಣಗಾಂವ ಅಳ್ಳೊಳ್ಳಿ | ಸಾಮಾನ್ಯ |
| 3. | ಶ್ರೀಮತಿ ಚನ್ನಬಸಮ್ಮ ಕೋ ಅನಂತರೆಡ್ಡಿ, ಬೆಳಗೇರಾ | ಮಹಿಳೆ |
| 4. | ಶ್ರೀ ರಾಮಚಂದ್ರ ಬಿನ್ ಹೊನ್ನಪ್ಪ ರೆಡ್ಡಿ, ವಾಡಿ | ಎಸ್.ಸಿ. |
| 5. | ಶ್ರೀ ತಾಹೇರ ಜುನೇದಿ, ಚಿತ್ತಾಪುರ | ಅ.ಸಂ. |
| 6. | ಶ್ರೀ ಗುರುನಾಥ ಪೊಸ್ತಾ, ಯಾಗಾಪೂರ | ಹಿಂ.ವರ್ಗ |

**ಗುಲ್ಬರ್ಗಾ ಜಿಲ್ಲೆ : ಜಿಲ್ಲಾ ಕೆ.ಡಿ.ಪಿ. ಸಮಿತಿಗೆ ಅಭ್ಯರ್ಥಿಗಳ ವಿವರ ಈ ಕೆಳಕಂಡಂತಿರುತ್ತದೆ.**

| ಕ್ರ.ಸಂ. | ಹೆಸರು ಮತ್ತು ವಿಳಾಸ<br>ಶ್ರೀ/ಶ್ರೀಮತಿ | ವರ್ಗ |
|---|---|---|
| 1. | ಶ್ರೀ ಸಿದ್ದರಾಮಪ್ಪ<br>ಮುಕ್ಕಾಂ ಪೋಸ್ಟ್ ಸಣ್ಣೂರು, ತಾ.ಜಿ. ಗುಲ್ಬರ್ಗಾ | ಹಿಂ.ವರ್ಗ |
| 2. | ಶ್ರೀ ಭೀಮರಾವ್<br>ಮುಕ್ಕಾಂ ಪೋಸ್ಟ್ ಯಾತನೂರ್, ತಾ.ಜೇವರ್ಗಿ, ಜಿ.ಗುಲ್ಬರ್ಗಾ | ಎಸ್.ಸಿ. |
| 3. | ಶ್ರೀ ನಾಗೇಂದ್ರಪ್ಪ ಸಾಹುಕಾರ್<br>ಮುಕ್ಕಾಂ ದುಗನೂರ್, ತಾ. ಸೇಡಂ, ಜಿ.ಗುಲ್ಬರ್ಗಾ | ಸಾಮಾನ್ಯ |
| 4. | ಶ್ರೀಮತಿ ಶಕುಂತಲ ಆಚಾರ್ಯ ಕೋಂ ಕೃಷ್ಣಮಾಚಾರ್ಯ<br>#1-949/23/46/ಎ, ಗಾಬೇರಿ ಲೇಔಟ್, ಹಳೇ ಜೇವರ್ಗಿ ರೋಡ್,<br>ಜಿ.ಗುಲ್ಬರ್ಗಾ | ಮಹಿಳೆ |
| 5. | ಶ್ರೀ ಖಾಜ ಹುಸೇನ್<br>ಮುಕ್ಕಾಂ ಅತನೂರ್, ತಾ.ಅಫಜಲ್‌ಪುರ, ಜಿ. ಗುಲ್ಬರ್ಗಾ | ಅ.ಸಂ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ-1&2

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

ಪಿ.ಆರ್. 2736

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಶ್ರೀ ಅನಿಲ್ ಕುಂಬ್ಳೆ, ಉಪಾಧ್ಯಕ್ಷರು, ರಾಜ್ಯ ವನ್ಯಜೀವಿ ಮಂಡಳಿ ಇವರ ಮುಖಂಡತ್ವದಲ್ಲಿ ಒಂದು ಉಪ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ :** ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಇವರ ಪತ್ರ ಸಂಖ್ಯೆ : ಬಿ2(ಸಿ1), ಸಿಡಬ್ಲ್ಯೂಎಲ್.ಸಿಆರ್-74/09-10/10-11 ದಿನಾಂಕ : 30-10-2010.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 30-10-2010ರ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಇವರು ದಿನಾಂಕ : 11-08-2010 ರಂದು ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ನಡೆದ 3ನೇ ರಾಜ್ಯ ವನ್ಯಜೀವಿ ಮಂಡಳಿಯ ಸಭೆಯಲ್ಲಿ ತೆಗೆದುಕೊಂಡ ನಿರ್ಣಯದಂತೆ ರಾಜ್ಯ ವನ್ಯಜೀವಿ ಮಂಡಳಿಗೆ ಬರುವ ಪ್ರಸ್ತಾವನೆಗಳ ಬಗ್ಗೆ ಸಭೆ ಸೇರಿ ವಿವರವಾಗಿ ಚರ್ಚೆ ನಡೆಸಿ ಅಂತಿಮ ನಿರ್ಣಯಕ್ಕಾಗಿ ರಾಜ್ಯ ವನ್ಯಜೀವಿ ಮಂಡಳಿಗೆ ಶಿಫಾರಸ್ಸು ಮಾಡಲು ಹಾಗೂ ಮಂಡಳಿಯು ವಹಿಸುವ ಇತರೆ ಕಾರ್ಯಗಳನ್ನು ನಿರ್ವಹಿಸಲು ಶ್ರೀ ಅನಿಲ್ ಕುಂಬ್ಳೆ, ಉಪಾಧ್ಯಕ್ಷರು, ರಾಜ್ಯ ವನ್ಯಜೀವಿ ಮಂಡಳಿ ಇವರ ಮುಖಂಡತ್ವದಲ್ಲಿ ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ಒಂದು ಉಪ ಸಮಿತಿಯನ್ನು ರಚಿಸಲು ಕೋರಿರುತ್ತಾರೆ.

| | | | |
|---|---|---|---|
| (i) | ಶ್ರೀ ಅನಿಲ್ ಕುಂಬ್ಳೆ, ಸಹ ಉಪಾಧ್ಯಕ್ಷರು, ರಾಜ್ಯ ವನ್ಯಜೀವಿ ಮಂಡಳಿ | – | ಅಧ್ಯಕ್ಷರು |
| (ii) | ಅಪರ ಮುಖ್ಯ ಕಾರ್ಯದರ್ಶಿ, ಪ್ರಧಾನ ಕಾರ್ಯದರ್ಶಿ<br>ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ, ಬೆಂಗಳೂರು | – | ಸದಸ್ಯರು |
| (iii) | ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ), ಬೆಂಗಳೂರು | – | ಸದಸ್ಯರು |
| (iv) | ಶ್ರೀ ಸಂಜಯ, ಗುಬ್ಬಿ | – | ಸದಸ್ಯರು |
| (v) | ಶ್ರೀ ಗಿರಿಜಾ ಶಂಕರ್ | – | ಸದಸ್ಯರು |
| (vi) | ಶ್ರೀಮತಿ ವಾಣಿ ರಾಘವೇಂದ್ರ ಪೈ | – | ಸದಸ್ಯರು |
| (vii) | ಅಪರ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ), ಬೆಂಗಳೂರು | – | ಸದಸ್ಯ ಕಾರ್ಯದರ್ಶಿ |

2. ಅಲ್ಲದೇ, ರಾಜ್ಯ ವನ್ಯಜೀವಿ ಮಂಡಳಿಯ ಸಭೆಯಲ್ಲಿ ಚರ್ಚಿಸುವ ವಿಷಯಕ್ಕೆ ಸಂಬಂಧಿಸಿದಂತೆ ಆಯಾ ಪ್ರದೇಶದ ರಾಜ್ಯ ವನ್ಯಜೀವಿ ಮಂಡಳಿಯ ಸ್ಥಳೀಯ ಸದಸ್ಯರು ಕೂಡ ಇಂತಹ ಸಭೆಗೆ ವಿಶೇಷ ಆಹ್ವಾನಿತರಾಗಿ ಸಭೆಯ ಸಹ ಸದಸ್ಯರಾಗಿರುತ್ತಾರೆ ಹಾಗೂ ಸಭೆಯ ವಿಷಯಗಳ ಮೇಲೆ ವಿವರವಾಗಿ ಚರ್ಚಿಸಿ ಉಪ ಸಮಿತಿಯು ತೆಗೆದುಕೊಂಡ ತೀರ್ಮಾನವನ್ನು ರಾಜ್ಯ ವನ್ಯಜೀವಿ ಮಂಡಳಿಯ ಅಧ್ಯಕ್ಷರಾದ ಮಾನ್ಯ ಮುಖ್ಯಮಂತ್ರಿಗಳ ಗಮನಕ್ಕೆ ತಂದು ಜರೂರಾಗಿ ತೀರ್ಮಾನ ತೆಗೆದುಕೊಳ್ಳಲು ಇದರಿಂದ ಸಹಕಾರವಾಗುತ್ತದೆ ಎಂದು ತಿಳಿಸಿ ಮೇಲ್ಕಂಡ ಉಪ ಸಮಿತಿಯನ್ನು ರಚಿಸಿ ಸರ್ಕಾರದ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

3. ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಅಪಜೀ 219 ಎಫ್‌ಡಬ್ಲ್ಯೂಎಲ್ 2010, ಬೆಂಗಳೂರು, ದಿನಾಂಕ : 29-11-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ದಿನಾಂಕ : 11-08-2010 ರಂದು ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ನಡೆದ 3ನೇ ರಾಜ್ಯ ವನ್ಯಜೀವಿ ಮಂಡಳಿಯ ಸಭೆಯಲ್ಲಿ ತೆಗೆದುಕೊಂಡ ನಿರ್ಣಯದಂತೆ ರಾಜ್ಯ ವನ್ಯಜೀವಿ ಮಂಡಳಿಗೆ ಬರುವ ಪ್ರಸ್ತಾವನೆಗಳ ಬಗ್ಗೆ ಸಭೆ ಸೇರಿ

ವಿವರವಾಗಿ ಚರ್ಚೆ ನಡೆಸಿ ಅಂತಿಮ ನಿರ್ಣಯಕ್ಕಾಗಿ ರಾಜ್ಯ ವನ್ಯಜೀವಿ ಮಂಡಳಿಗೆ ಶಿಫಾರಸ್ಸು ಮಾಡಲು ಹಾಗೂ ಮಂಡಳಿಯು ವಹಿಸುವ ಇತರೆ ಕಾರ್ಯಗಳನ್ನು ನಿರ್ವಹಿಸಲು ಶ್ರೀ ಅನಿಲ್ ಕುಂಬ್ಳೆ, ಸಹ ಉಪಾಧ್ಯಕ್ಷರು, ರಾಜ್ಯ ವನ್ಯಜೀವಿ ಮಂಡಳಿ ಇವರ ಮುಖಂಡತ್ವದಲ್ಲಿ ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ಒಂದು ಉಪ ಸಮಿತಿಯನ್ನು ರಚಿಸಿದೆ.

| | | | |
|---|---|---|---|
| (i) | ಶ್ರೀ ಅನಿಲ್ ಕುಂಬ್ಳೆ, ಸಹ ಉಪಾಧ್ಯಕ್ಷರು, ರಾಜ್ಯ ವನ್ಯಜೀವಿ ಮಂಡಳಿ | – | ಅಧ್ಯಕ್ಷರು |
| (ii) | ಅಪರ ಮುಖ್ಯ ಕಾರ್ಯದರ್ಶಿ, ಪ್ರಧಾನ ಕಾರ್ಯದರ್ಶಿ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ, ಬೆಂಗಳೂರು | – | ಸದಸ್ಯರು |
| (iii) | ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ), ಬೆಂಗಳೂರು | – | ಸದಸ್ಯರು |
| (iv) | ಶ್ರೀ ಸಂಜಯ, ಗುಬ್ಬಿ | – | ಸದಸ್ಯರು |
| (v) | ಶ್ರೀ ಗಿರಿಜಾ ಶಂಕರ್ | – | ಸದಸ್ಯರು |
| (vi) | ಶ್ರೀಮತಿ ವಾಣಿ ರಾಘವೇಂದ್ರ ಪೈ | – | ಸದಸ್ಯರು |
| (vii) | ಅಪರ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ), ಬೆಂಗಳೂರು | – | ಸದಸ್ಯ ಕಾರ್ಯದರ್ಶಿ |

2. ಅಲ್ಲದೇ, ರಾಜ್ಯ ವನ್ಯಜೀವಿ ಮಂಡಳಿಯ ಸಭೆಯಲ್ಲಿ ಚರ್ಚಿಸುವ ವಿಷಯಕ್ಕೆ ಸಂಬಂಧಿಸಿದಂತೆ ಆಯಾ ಪ್ರದೇಶದ ರಾಜ್ಯ ವನ್ಯಜೀವಿ ಮಂಡಳಿಯ ಸ್ಥಳೀಯ ಸದಸ್ಯರು ಕೂಡ ಇಂತಹ ಸಭೆಗೆ ವಿಶೇಷ ಆಹ್ವಾನಿತರಾಗಿ ಸಭೆಯ ಸಹ ಸದಸ್ಯರಾಗಿರುತ್ತಾರೆ. ಉಪ ಸಮಿತಿಯು ವಿವರವಾಗಿ ಚರ್ಚಿಸಿದ ವಿಷಯಗಳ ಪ್ರಸ್ತಾವನೆಗಳನ್ನು ರಾಜ್ಯ ವನ್ಯಜೀವಿ ಮಂಡಳಿಯ ಅಧ್ಯಕ್ಷರಾದ ಮಾನ್ಯ ಮುಖ್ಯಮಂತ್ರಿಗಳಿಗೆ ತೀರ್ಮಾನಕ್ಕಾಗಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಉಮಾದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

ಪಿ.ಆರ್. 2737

## ಇಂಧನ ಸಚಿವಾಲಯ

**ವಿಷಯ :** ಮೆ॥ Mythree Power Developers ರವರ 250 ಕಿ.ವ್ಯಾ ಸಾಮರ್ಥ್ಯದ ವಾಣಿವಿಲಾಸ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ವಿಸ್ತರಣೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 6 ಎನ್‌ಸಿಇ 2005, ದಿನಾಂಕ : 22–03–2005.
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 525 ಎನ್‌ಸಿಇ 2009 ದಿನಾಂಕ : 03–12–2009.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/SH-199/Vanivilas MHS/2011/2211, ದಿನಾಂಕ : 25/26–07–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ Mythree Power Developers ಕಂಪನಿಗೆ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕಿನ ಹೊಂಗಳ್ಳಿ ಗ್ರಾಮದ ಬಳಿ ಕೆ.ಆರ್.ಎಸ್. ಅಣೆಕಟ್ಟಿನಿಂದ 1 ಕಿ.ಮಿ. ಕೆಳ ತೊರೆಯಲ್ಲಿ ಬಲದಂಡೆ ಲೋಲೆವೆಲ್ ಕಾಲುವೆಗೆ ಅಡ್ಡಲಾಗಿ 250 ಕಿಲೋವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಅದೇಶದಲ್ಲಿ ಮೇಲ್ಕಂಡ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶವನ್ನು ದಿನಾಂಕ : 06–10–2010ರವರೆಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ॥ Mythree Power Developers ರವರು ಮೇಲ್ಕಂಡ ಯೋಜನೆ ಸಂಬಂಧ ಕೆಲವೊಂದು ಶಾಸನಬದ್ಧ ಅನುಮತಿ ಪಡೆದಿರುವುದರಿಂದ ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಕಾಶವನ್ನು ಅಂತಿಮ ಅವಕಾಶವಾಗಿ ದಿನಾಂಕ : 31–03–2012ರವರೆಗೆ ವಿಸ್ತರಿಸಲು ಶಿಫಾರಸ್ಸು ಮಾಡಿರುತ್ತಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 352 ಎನ್‌ಸಿಇ 2011, ಬೆಂಗಳೂರು, ದಿನಾಂಕ : 28–11–2011**

ಮೆ॥ Mythree Power Developers ಕಂಪನಿಗೆ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟನ ತಾಲ್ಲೂಕಿನ ಹೊಂಗಳ್ಳಿ ಗ್ರಾಮದ ಬಳಿ ಕೆ.ಆರ್.ಎಸ್. ಅಣೆಕಟ್ಟಿನಿಂದ 1 ಕಿ.ಮಿ. ಕೆಳ ತೊರೆಯಲ್ಲಿ ಬಲದಂಡೆ ಲೋಲೆವೆಲ್ ಕಾಲುವೆಗೆ ಅಡ್ಡಲಾಗಿ ಹಂಚಿಕೆಯಾಗಿರುವ 250 ಕಿಲೋವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಅಂತಿಮ ಕಾಲಾವಕಾಶವನ್ನು ದಿನಾಂಕ : 31–03–2012ರವರೆಗೆ ವಿಸ್ತರಿಸಲಾಗಿದೆ.

ಈ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

ಪಿ.ಆರ್. 2738

## ಕಂದಾಯ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆಯ ಖಾನಾಪುರ ತಾಲ್ಲೂಕಿನ ತೋರಾಳಿ ಗ್ರಾಮದ ರಿ.ಸ.ನಂ. 44, 45, 57 ಹಾಗೂ ದೇವಾಚಿಹಟ್ಟಿ ಗ್ರಾಮದ ರಿ.ಸ.ನಂ. 12 ಹಾಗೂ ಹೆಬ್ಬಾನಟ್ಟಿ ಗ್ರಾಮದ ರಿ.ಸ.ನಂ. 23/ಅ 3ರಲ್ಲಿ ಹೆಚ್ಚುವರಿ ಜಮೀನನ್ನು ಕೌಂಟರ ಇನ್‌ಸರ್ಜೆನ್ಸಿ ಹಾಗೂ ಆಂಟಿ ಟೆರರಿಸ್ಟ್ ಸೂಲ್ಕ್ ಸ್ಥಾಪಿಸಲು ಸಿಆರ್‌ಪಿಎಫ್ ಇವರಿಗೆ ಒಟ್ಟು 408–31 ಎಕರೆ ಜಮೀನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1. ಡಿಐಜಿಪಿ ಗ್ರೂಪ್ ಸೆಂಟರ್ ಸಿಆರ್‌ಪಿಎಫ್ ಬೆಂಗಳೂರು ರವರ ಪತ್ರ ಸಂಖ್ಯೆ : ಬಿವಿ–1/09–10–ಜಿಸಿ (ಬಿಎಲ್‌ಡಿಜಿ)(ಲ್ಯಾಂಡ್) ದಿನಾಂಕ : 17–4–2010. ಹಾಗೂ ದಿನಾಂಕ : 15–9–11
2. ಪ್ರಾದೇಶಿಕ ಆಯುಕ್ತರು ಬೆಳಗಾವಿ ವಿಭಾಗ ಬೆಳಗಾವಿ ರವರ ಪತ್ರ ಸಂಖ್ಯೆ : ಪ್ರಾಆಬೆ ಭೂಮಿ/4 : ಎಲ್‌ಜಿಎಲ್/ವಿವಾ/22/11–12, ದಿನಾಂಕ : 22–6–2011 ಹಾಗೂ ದಿನಾಂಕ : 10–10–2011.
3. ಮಾನ್ಯ ಜಲಸಂಪನ್ಮೂಲ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿ ದಿನಾಂಕ : 3–11–2011.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ : 7–4–2010ರ ಹಾಗೂ ದಿನಾಂಕ : 15–9–2011ರ ಪತ್ರದಲ್ಲಿ ಡಿಐಜಿಪಿ ಜಿಸಿ ಸಿಆರ್‌ಪಿಎಫ್ ಬೆಂಗಳೂರು ರವರು ಬೆಳಗಾವಿ ಜಿಲ್ಲೆಯಲ್ಲಿ ಕೌಂಟರ ಇನ್‌ಸರ್ಜೆನ್ಸಿ ಹಾಗೂ ಆಂಟಿ ಟೆರರಿಸ್ಟ್ ಸೂಲ್ಕ್ ಸ್ಥಾಪಿಸಲು ಸುಮಾರು 350 ರಿಂದ 400 ಎಕರೆ ಜಮೀನನ್ನು ಮಂಜೂರು ಮಾಡಲು ಕೋರಿರುತ್ತಾರೆ.

ಪ್ರಾದೇಶಿಕ ಆಯುಕ್ತರು ಬೆಳಗಾವಿ ವಿಭಾಗ, ಬೆಳಗಾವಿ ರವರ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಬೆಳಗಾವಿ ಜಿಲ್ಲೆಯ, ಖಾನಾಪುರ ತಾಲ್ಲೂಕಿನ, ತೋರಾಳಿ ಗ್ರಾಮದ ರಿ.ಸ.ನಂ. 44,45, 57 ಹಾಗೂ ದೇವಚಿಹಟ್ಟಿ ಗ್ರಾಮದ ರಿ.ಸ.ನಂ. 12 ಹಾಗೂ ಹೆಬ್ಬಾನಟ್ಟಿ ಗ್ರಾಮದ ರಿ.ಸ.ನಂ. 23/ಅ 3ರಲ್ಲಿ ಹೆಚ್ಚುವರಿ ಜಮೀನನ್ನು ಕೌಂಟರ್ ಇನ್‌ಸರ್ಜೆನ್ಸಿ ಹಾಗೂ ಆಂಟಿ ಟೆರರಿಸ್ಟ್ ಸೂಲ್ಕ್ ಸ್ಥಾಪಿಸಲು ಸಿಆರ್‌ಪಿಎಫ್ ಇವರಿಗೆ ಒಟ್ಟು 408–31 ಎಕರೆ ಜಮೀನನ್ನು ಮಂಜೂರು ಮಾಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಜಮೀನು ಮಂಜೂರಾತಿಗೆ ಕೋರಿರುವ ಇಲಾಖೆಯು ಕೇಂದ್ರ ಸರ್ಕಾರದ ಸಂಸ್ಥೆಯಾಗಿದ್ದು, ಬೆಳಗಾವಿ ಜಿಲ್ಲೆಯಲ್ಲಿ ಕೌಂಟರ್ ಇನ್‌ಸರ್ಜೆನ್ಸಿ ಹಾಗೂ ಆಂಟಿ ಟೆರರಿಸ್ಟ್ ಸೂಲ್ಕ್ ಸ್ಥಾಪಿಸುವ ಉದ್ದೇಶಕ್ಕಾಗಿ ವಿವಿಧ ಸ.ನಂ. ವಿವರ ಈ ಕೆಳಗಿನಂತಿದೆ.

| ಕ್ರಮ ಸಂಖ್ಯೆ | ಗ್ರಾಮದ ಹೆಸರು | ಸ.ನಂ. | ಕ್ಷೇತ್ರ (ಎ–ಗು) |
|---|---|---|---|
| 1 | ತೋರಾಳಿ | 44 | 91.24 |
| 2 | ತೋರಾಳಿ | 45 | 96.32 |
| 3 | ತೋರಾಳಿ | 57 | 38.01 |
| 4 | ದೇವಾಚಿಹಟ್ಟಿ | 12/1 | 132.14 |
| 5 | ಹೆಬ್ಬಾನಟ್ಟಿ | 23/ಅ3 | 50.00 |
| | ಒಟ್ಟು | | 408.31 |

ಖಾನಾಪುರ ತಾಲ್ಲೂಕಿನ ತೋರಾಳಿ ಗ್ರಾಮದ ಸ.ನಂ. 44, 45, 57 ಹಾಗೂ ದೇವಾಚಿಹಟ್ಟಿ ಗ್ರಾಮದ ಸ.ನಂ. 12/1 ಹಾಗೂ ಹೆಬ್ಬಾನಟ್ಟಿ ಗ್ರಾಮದ ಸ.ನಂ. 23/ಅ3 ಇವುಗಳ ಪಹಣಿ ಪತ್ರಿಕೆ ಪರಿಶೀಲಿಸಲಾಗಿ, ತೋರಳಿ ಗ್ರಾಮದ ಎಲ್ಲಾ ಸ.ನಂ.ಗಳು ಕರ್ನಾಟಕ ಭೂಸುಧಾರಣೆ ಕಾಯ್ದೆಯಡಿಯಲ್ಲಿ ಹೆಚ್ಚುವರಿ ಜಮೀನೆಂದು ನಿರ್ಧರಿತವಾಗಿದ್ದು, ಈ ಬಗ್ಗೆ ವಿಶೇಷ ತಹಶೀಲ್ದಾರ್ (ಭೂಸುಧಾರಣೆ) ಖಾನಾಪುರ ತಾಲ್ಲೂಕು ಬೆಳಗಾವಿ ಇವರು ಕೆಎಲ್‌ಆರ್‌ಡಿಸಿಎಲ್ ಎಸ್‌ಆರ್ 719/76ರ ದಿನಾಂಕ : 28–9–1977ರ ಪ್ರಕಾರ ಅಧಿಸೂಚನೆ ಹೊರಡಿಸಿರುತ್ತಾರೆ. ಖಾನಾಪುರ ತಾಲ್ಲೂಕಿನಲ್ಲಿ ಒಟ್ಟು 2109.13 ಎಕರೆ ಜಮೀನನ್ನು ಸರ್ಕಾರಕ್ಕೆ ಹೆಚ್ಚುವರಿ ಜಮೀನೆಂದು ಪಡೆದ ನಂತರ ಸಾಗುವಳಿಗೆ ಯೋಗ್ಯವಿಲ್ಲದ ಕಾರಣ ಅವುಗಳನ್ನು ಕರ್ನಾಟಕ ಭೂಸುಧಾರಣೆ ಕಾಯ್ದೆ 1961ರ ಕಲಂ 77(3)ರಡಿ ಸಾರ್ವಜನಿಕರ ಉಪಯೋಗಕ್ಕಾಗಿ ಅಂದರೆ ಮಹಾದಾಯಿ ಮತ್ತು ಮಾರ್ಖಾಂಡೇಯ ಯೋಜನೆಗಳಲ್ಲಿ ಜಮೀನು ಮುಳುಗಡೆಯಾದ ಸಂತ್ರಸ್ಥರಿಗೆ ಪುನರ್ ವಸತಿ ಕಲ್ಪಿಸುವ ಸಲುವಾಗಿ ಕಾಯ್ದಿರಿಸಿದ್ದು, ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ :269 : ಆರ್‌ಇಎಚ್98 ದಿನಾಂಕ : 29–3–2000ರ ಆದೇಶದಿಂದ ಕಂಡು ಬರುತ್ತದೆ.

ಈ ಕ್ಷೇತ್ರದಲ್ಲಿ ಈಗಾಗಲೇ ಸರ್ಕಾರದಿಂದ 12–00 ಎಕರೆ ಜಮೀನನ್ನು ಕಡಿಮೆಗೊಳಿಸಿ ಅರಣ್ಯ ಇಲಾಖೆಗೆ ಅರಣ್ಯೇಕರಣಕ್ಕಾಗಿ ನೀಡಿದ್ದು, ಸರ್ಕಾರದ ಪತ್ರ ಸಂಖ್ಯೆ : ಆರ್‌ಡಿ : 42 : ಎಲ್‌ಜಿಎಲ್ : 2002 ದಿನಾಂಕ : 26–7–2002ರ ಮೇಲಿಂದ ಕಂಡು ಬರುತ್ತದೆ. ಈ ಹಿನ್ನೆಲೆಯಲ್ಲಿ ಮೇಲ್ಕಂಡ 3 ಗ್ರಾಮಗಳ 5 ಸ.ನಂ.ಗಳ ಒಟ್ಟು ಕ್ಷೇತ್ರ 408.31 ಎಕರೆ ಜಮೀನನ್ನು ಈ ಹಿಂದೆ ದಿನಾಂಕ : 26–7–2002ರಲ್ಲಿ ಮಾಡಿದ ಆದೇಶದಂತೆ ಈ ಪ್ರಕರಣದಲ್ಲಿಯೂ ಸಾರ್ವಜನಿಕ ಉದ್ದೇಶದಿಂದ ಕಡಿಮೆಗೊಳಿಸಿ ಡಿಐಜಿಪಿ ಜಿಸಿ ಸಿಆರ್‌ಪಿಎಫ್ ಯಲಹಂಕ ಬೆಂಗಳೂರು ಇವರು ಬೆಳಗಾವಿ ಜಿಲ್ಲೆಯಲ್ಲಿ ಕೌಂಟರ ಇನ್‌ಸರ್ಜೆನ್ಸಿ ಹಾಗೂ ಆಂಟಿ ಟೆರರಿಸ್ಟ್ ಸೂಲ್ಕ್ ಸ್ಥಾಪಿಸುವ ಉದ್ದೇಶಕ್ಕಾಗಿ ಮಂಜೂರು ಮಾಡಲು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ : 3–11–2011ರ ನಡವಳಿಯಲ್ಲಿ ಸಿಆರ್‌ಪಿಎಫ್ ಹಾಗೂ ಕಂದಾಯ, ಜಲಸಂಪನ್ಮೂಲ, ಕರ್ನಾಟಕ ನೀರಾವರಿ ನಿಗಮ ನಿಯಮಿತ ಅಧಿಕಾರಿಗಳೊಂದಿಗೆ ಮಾನ್ಯ ಬೃಹತ್ ಮತ್ತು ಮಾಧ್ಯಮ ನೀರಾವರಿ ಸಚಿವರು ಸಭೆ ನಡೆಸಿ, ಈ ಜಮೀನಿಗೆ ಸಂಬಂಧಿಸಿದಂತೆ ಜಿಲ್ಲಾಡಳಿತ ಮತ್ತು ನೀರಾವರಿ ಇಲಾಖೆಯವರು ಒದಗಿಸಿದ ನಕ್ಷೆಗಳನ್ನು ಮಾನ್ಯ ಸಚಿವರು ಪರಿಶೀಲಿಸಿ, ಕೆಲವೊಂದು ಷರತ್ತನ್ನು ವಿಧಿಸಿ ತಮ್ಮ ಸಹಮತಿಯನ್ನು ವ್ಯಕ್ತಪಡಿಸಿರುತ್ತಾರೆ.

ಪ್ರಾದೇಶಿಕ ಆಯುಕ್ತರು ಬೆಳಗಾವಿ ರವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಶವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 52 ಎಲ್‌ಜಿಎಲ್ 2010, ಬೆಂಗಳೂರು, ದಿನಾಂಕ : 21–11–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಳಗಾವಿ ಜಿಲ್ಲೆಯ, ಖಾನಾಪುರ ತಾಲ್ಲೂಕಿನ, ತೋರಾಳಿ ಗ್ರಾಮದ ರಿ.ಸ.ನಂ. 44,45, 57 ಹಾಗೂ ದೇವಾಚಿಹಟ್ಟಿ ಗ್ರಾಮದ ರಿ.ಸ.ನಂ. 12 ಹಾಗೂ ಹೆಬ್ಬಾನಟ್ಟಿ ಗ್ರಾಮದ ರಿ.ಸ.ನಂ. 23/ಅ 3ರಲ್ಲಿನ 2109.13 ಎಕರೆ ಹೆಚ್ಚುವರಿ ಜಮೀನನ್ನು ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 269 ಆರ್‌ಇಎಚ್ 98 ದಿನಾಂಕ : 29–3–2000 ರಲ್ಲಿ ಮಹಾದಾಯಿ ಮತ್ತು ಮಾರ್ಖಾಂಡೇಯ ಯೋಜನೆಗಳಲ್ಲಿ ಜಮೀನು ಮುಳುಗಡೆಯಾದ ಸಂತ್ರಸ್ಥರಿಗೆ ಕಾಯ್ದಿರಿಸಿದನ್ನು ಕಡಿತಗೊಳಿಸಿ, ಒಟ್ಟು 408.31 ಎಕರೆ ಜಮೀನನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 27ರಡಿಯಲ್ಲಿ ಅಧಿಕಾರವನ್ನು ಚಲಾಯಿಸಿ, ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ, ಕೌಂಟರ ಇನ್‌ಸರ್ಜೆನ್ಸಿ ಹಾಗೂ ಆಂಟಿ ಟೆರರಿಸ್ಟ್ ಸೂಲ್ಕ್ ಸ್ಥಾಪಿಸಲು ಸಿಆರ್‌ಪಿಎಫ್ ಜಿಸಿ ಬೆಂಗಳೂರು ಇವರಿಗೆ ಉಚಿತವಾಗಿ ಈ ಕೆಳಕಂಡ ಷರತ್ತನ್ನು ವಿಧಿಸಿ ಮಂಜೂರು ಮಾಡಿ ಆದೇಶಿಸಿದೆ.

1. ಸಿಆರ್‌ಪಿಎಫ್ ಇವರು ಸ್ಥಾಪಿಸಬಹುದಾದ ತರಬೇತಿ ಸಂಸ್ಥೆಯಲ್ಲಿ ಶೇಕಡ 10 ರಷ್ಟು ಸ್ಥಾನಗಳನ್ನು ರಾಜ್ಯದ ಪೋಲೀಸ್ ಸಿಬ್ಬಂದಿಯವರಿಗೆ ಮೀಸಲಿಡತಕ್ಕದ್ದು.

2. ಸಿಆರ್‌ಪಿಎಫ್ ಕೇಂದ್ರಕ್ಕೆ ನೀಡಲಾಗಿರುವ ಜಮೀನು ಮಲಪ್ರಭಾ ಜಲಾನಯನ ಪ್ರದೇಶದಲ್ಲಿ ಬರುತ್ತಿರುವುದರಿಂದ ಆ ಜಮೀನಿನಲ್ಲಿರುವ, ಹಳ್ಳಕೊಳ್ಳಗಳಿಗೆ ಯಾವುದೇ ರೀತಿಯ ಧಕ್ಕೆಯಾಗದಂತೆ ಕೇಂದ್ರದ ಸ್ಥಾಪನೆಗೆ ಯೋಜನೆ ರೂಪಿಸಬೇಕು.

3. ಸರ್ಕಾರದ ಆದೇಶ ಪ್ರಕಾರ ಈ ಜಮೀನು ಮಹಾದಾಯಿ ಹಾಗೂ ಮಾರ್ಕಡೇಯ ಯೋಜನೆಗಳಿಗೆ ಮೀಸಲಾಗಿರುವುದರಿಂದ ಇನ್ನು ಮುಂದೆ ಕಂದಾಯ ಇಲಾಖೆಯವರು ಸದರಿ ಜಮೀನನ್ನು ಬೇರೆಯವರಿಗೆ ನೀಡುವ ಯಾವುದೇ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಬಾರದು.

4. ಕೇಂದ್ರ ಸರ್ಕಾರದ ಸಿಆರ್‌ಪಿಎಫ್ ಕೇಂದ್ರಕ್ಕೆ ನೀಡಲಾಗಿರುವ 408 ಎಕರೆ 31 ಗುಂಟೆ ಜಮೀನಿನ ಬದಲಾಗಿ ಅಷ್ಟೇ ಕ್ಷೇತ್ರದ ಜಮೀನನ್ನು ಕಂದಾಯ ಇಲಾಖೆ ಬೇರೆ ಕಡೆಯಲ್ಲಿ ಜಲಸಂಪನ್ಮೂಲ ಇಲಾಖೆಗೆ ಮೀಸಲಿಡಬೇಕು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 717 ವೆಚ್ಚ–7/2011, ದಿನಾಂಕ : 11–8–2011ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಜಿ. ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ–3).

ಪಿ.ಆರ್. 2739

## ವಸತಿ ಸಚಿವಾಲಯ

**ವಿಷಯ :** ಶಿವಾಜಿನಗರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂ. ವಇ 42 ಹೆಚ್‌ಎಎಂ 1999 ದಿನಾಂಕ : 10–5–2000.

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪಟ್ಟಣ ಹಾಗೂ ಗ್ರಾಮೀಣ ಪ್ರದೇಶಗಳಿಗೆ ಪ್ರತ್ಯೇಕ ಆಶ್ರಯ ಸಮಿತಿಗಳನ್ನು ಪುನರ್ ರಚಿಸಿ, ಸಮಿತಿಯ ಸದಸ್ಯರ ಅಧಿಕಾರ ಮತ್ತು ಕರ್ತವ್ಯಗಳನ್ನು ನಿಗದಿಪಡಿಸಿ ಆದೇಶವನ್ನು ಹೊರಡಿಸಿದೆ. ಈ ಪರಿಷ್ಕೃತ ಆದೇಶದನ್ವಯ ಶಿವಾಜಿನಗರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 75 ಹೆಚ್‌ಎಎಸ್ 2011, ಬೆಂಗಳೂರು, ದಿನಾಂಕ : 28ನೇ ನವೆಂಬರ್ 2011.**

ಶಿವಾಜಿನಗರ ನಗರ ಆಶ್ರಯ ಸಮಿತಿಗೆ ಈ ಕೆಳಕಂಡಂವರನ್ನು ಅಧಿಕಾರೇತರ ಸದಸ್ಯರನ್ನು ನೇಮಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿ ಆದೇಶಿಸಿದೆ.

| ಕ್ರ.ಸಂ. | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1. | ಶ್ರೀ ವಿ.ಪ್ರಶಾಂತ, ನಂ. 15, 3ನೇ ಅಡ್ಡರಸ್ತೆ, ಕೃಷ್ಣಮ್ಮ ಗಾರ್ಡನ್, ಜೆ.ಸಿ. ನಗರ, ಬೆಂಗಳೂರು–560006. | ಓ.ಬಿ.ಸಿ. |
| 2. | ಎಸ್. ಉದಯಕುಮಾರ್, ನಂ. 15, ಸೆಪ್ಪಿಂಗ್ಸ್ ರಸ್ತೆ, ಬೆಂಗಳೂರು–560001. | ಸಾಮಾನ್ಯ |
| 3. | ಶ್ರೀ ಸುಮೆಧಾನ್ ವಿಲ್ಸನ್, ನಂ. 6, 4 ಸ್ಟ್ರೀಟ್, 2ನೇ ಕ್ರಾಸ್, ತಿಮ್ಮಯ್ಯ ರಸ್ತೆ, ಭಾರತೀನಗರ, ಬೆಂಗಳೂರು–01 | ಅಲ್ಪಸಂಖ್ಯಾತ |
| 4. | ಶ್ರೀಮತಿ ನಿರ್ಮಲಾ ಎ., ನಂ. 59, 2ನೇ ಅಡ್ಡರಸ್ತೆ, ಬ್ರಾಡ್‌ವೇ ರಸ್ತೆ, ಶಿವಾಜಿನಗರ, ಬೆಂಗಳೂರು–560051. | ಎಸ್.ಸಿ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ. ಶಂಕರಪ್ಪ**
ಪೀಠಾಧಿಕಾರಿ–2, ವಸತಿ ಇಲಾಖೆ.

ಪಿ.ಆರ್. 2740

## ಶಿಕ್ಷಣ ಸಚಿವಾಲಯ

**ವಿಷಯ :** ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರು ನಡೆಸುತ್ತಿರುವ ಸಿದ್ಧಾರ್ಥ ಕಲಾ ಮತ್ತು ವಾಣಿಜ್ಯ ಪದವಿ ಕಾಲೇಜು, ಬೀದರ್ ಕಾಲೇಜಿನ ಬೋಧಕರ ಹುದ್ದೆಗಳನ್ನು ಅನುದಾನದ ವ್ಯಾಪ್ತಿಗೆ ಒಳಪಡಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರಿ ಅಧಿಸೂಚನೆ ಸಂಖ್ಯೆ. ಇಡಿ 551 ಯುಪಿಸಿ 99, ದಿನಾಂಕ : 7–8–2003.
2. ಸರ್ಕಾರಿ ಅಧಿಸೂಚನೆ ಸಂಖ್ಯೆ. ಇಡಿ 30 ಯುಪಿಸಿ 2008, ದಿನಾಂಕ : 13–5–2009.
3. ಸರ್ಕಾರಿ ಅಧಿಸೂಚನೆ ಸಂಖ್ಯೆ. ಇಡಿ 30 ಯುಪಿಸಿ 2008, ದಿನಾಂಕ : 5–10–2009.
4. ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ : ಕಾಶಿಇ : 01 : ಪ.ಜಾ.ಪ.ಪಂ. ಕಾವೇ : ಗುವಿ: 2010–11 : ಪಿಸಿಸಿ–2, ದಿನಾಂಕ : 26–8–2010 ಮತ್ತು 28–10–2011.
5. ಸರ್ಕಾರಿ ಆದೇಶ ಸಂಖ್ಯೆ. ಇಡಿ 137 ಯುಪಿಸಿ 2010, ದಿನಾಂಕ : 18–5–2011.

**ಪ್ರಸ್ತಾವನೆ :**

ಮೇಲೆ ಓದಲಾದ (1) ರ ದಿನಾಂಕ : 7–8–2003ರ ಸರ್ಕಾರಿ ಅಧಿಸೂಚನೆಯಲ್ಲಿ ರಚಿಸಲಾದ ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು 2003ರ ನಿಯಮ 8(1)ರನ್ವಯ ದಿನಾಂಕ : 1–6–1987ರ ನಂತರ ಪ್ರಾರಂಭಿಸಲಾದ ಯಾವುದೇ ಖಾಸಗಿ ಪದವಿ ಕಾಲೇಜುಗಳು ಮತ್ತು ವಿಷಯಗಳನ್ನು ಅನುದಾನದ ವ್ಯಾಪ್ತಿಗೆ ಒಳಪಡಿಸಲು ಅವಕಾಶವಿರುವುದಿಲ್ಲ.

ರಾಜ್ಯದಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಆಡಳಿತ ಮಂಡಳಿಗಳು ದಿನಾಂಕ : 1–6–1987 ರಿಂದ ದಿನಾಂಕ : 31–3–1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲಾಗುತ್ತಿರುವ ಕಾಲೇಜುಗಳು ಮತ್ತು ಕೋರ್ಸ್‌ಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಸರ್ಕಾರ ತೀರ್ಮಾನಿಸಿ ಈ ಕುರಿತು ನಿಯಮಗಳನ್ನು ರಚಿಸಲು ದಿನಾಂಕ : 18–2–2009ರಂದು ನಡೆದ ಸಚಿವ ಸಂಪುಟ ಸಭೆಯಲ್ಲಿ ಅನುಮೋದನೆ ಪಡೆಯಲಾಗಿದೆ.

ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಆಡಳಿತ ಮಂಡಳಿಯಿಂದ ನಡೆಸಲ್ಪಡುತ್ತಿರುವ ಖಾಸಗಿ ಪದವಿ ಕಾಲೇಜುಗಳಿಗೆ ಸಂಬಂಧಿಸಿದಂತೆ ಮಾತ್ರ ಮೇಲೆ ಹೇಳಿದ ನಿಯಮ 8ಕ್ಕೆ ಸೂಕ್ತ ಸೇರ್ಪಡೆ ಮಾಡಿ ದಿನಾಂಕ : 1–6–87 ರಿಂದ 31–3–95ರ ಅವಧಿಯಲ್ಲಿ ಪ್ರಾರಂಭಿಸಲ್ಪಟ್ಟ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರು ನಡೆಸುತ್ತಿರುವ ಪ್ರಥಮ ದರ್ಜೆ ಕಾಲೇಜುಗಳನ್ನು ವೇತನಾನುದಾನಕ್ಕೊಳಪಡಿಸಲು ಓದಲಾದ (2) ದಿನಾಂಕ : 13–5–2009ರ ಅಧಿಸೂಚನೆಯಲ್ಲಿ ಸೂಕ್ತ ತಿದ್ದುಪಡಿ ಮಾಡಿ ಅವಕಾಶ ಕಲ್ಪಿಸಲಾಗಿದೆ. ಅದರಂತೆ ಮೇಲೆ (3)ರಲ್ಲಿ ಓದಲಾದ ದಿನಾಂಕ : 5–10–2009ರಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಆಡಳಿತ ಮಂಡಳಿಗಳಿಗೆ ಸೇರಿದ ಶಿಕ್ಷಣ ಸಂಸ್ಥೆಗಳ ವತಿಯಿಂದ ದಿನಾಂಕ : 1–6–1987 ರಿಂದ 31–3–1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲ್ಪಡುತ್ತಿರುವ ಪ್ರಥಮ ದರ್ಜೆ ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಸರ್ಕಾರವು ಕೆಲವು ಮಾನದಂಡಗಳನ್ನು ನಿಗಧಿಪಡಿಸಿ ಆದೇಶ ಹೊರಡಿಸಿದೆ. ಮೇಲೆ (4) ರಲ್ಲಿ ಓದಲಾದ ದಿನಾಂಕ : 26–8–2010ರ ಪ್ರಸ್ತಾವನೆಯಲ್ಲಿ ಕಾಲೇಜು ಶಿಕ್ಷಣ ಆಯುಕ್ತರು ಸದರಿ ಕಾಲೇಜಿನ ಯಾವ ಯಾವ ಬೋಧಕ ಮತ್ತು ಬೋಧಕೇತರ ಸಿಬ್ಬಂದಿ ವರ್ಗದವರನ್ನು ವೇತನಾನುದಾನಕ್ಕೆ ಒಳಪಡಿಸಬೇಕು ಎಂಬುದನ್ನು ಪರಿಶೀಲಿಸಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ. ಆಯುಕ್ತಾಲಯ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ ನಂತರ ಆಡಳಿತ ಮಂಡಳಿಯು ಕೆಲವು ಉಪನ್ಯಾಸಕರುಗಳು ಎಂ.ಫಿಲ್. ಪದವಿ ಪಡೆದ ಬಗ್ಗೆ ದೃಢೀಕೃತ ಪ್ರಮಾಣ ಪತ್ರಗಳನ್ನು ಸರ್ಕಾರಕ್ಕೆ ಸಲ್ಲಿಸಿರುವರು. ಅವುಗಳನ್ನು ಮತ್ತು ಕಾಲೇಜು ಶಿಕ್ಷಣ ನಿರ್ದೇಶನಾಲಯದ ಪ್ರಸ್ತವನೆಯಲ್ಲಿ ಪ್ರಸ್ತಾಪಿಸಲಾದ ಅಭ್ಯರ್ಥಿಗಳ ವಿದ್ಯಾರ್ಹತೆ, ವಿಷಯಗಳ ಕಾರ್ಯಭಾರ ಮತ್ತು ಮೀಸಲಾತಿ ಪರಿಶೀಲಿಸಿ ಸದರಿ ಕಾಲೇಜನ್ನು ಮತ್ತು ಸದರಿ ಕಾಲೇಜಿನಲ್ಲಿ ವಿಷಯವಾರು ಹುದ್ದೆಗಳ ಎದುರು ಕಾರ್ಯ ನಿರ್ವಹಿಸುತ್ತಿರುವ ಅರ್ಹ ಉಪನ್ಯಾಸಕರುಗಳನ್ನು ಈಗಾಗಲೇ ಮೇಲೆ ಓದಲಾದ (5)ರ ಸರ್ಕಾರಿ ಆದೇಶದಲ್ಲಿ ವೇತನಾನುದಾನದ ವ್ಯಾಪ್ತಿಗೆ ತರಲಾಗಿರುತ್ತದೆ. ಸದರಿ ಕಾಲೇಜಿನಲ್ಲಿ ಇತಿಹಾಸ ವಿಷಯಕ್ಕೆ ಸಂಬಂಧಿಸಿದಂತೆ ಇಬ್ಬರನ್ನು ಅಂದರೆ ಶ್ರೀ ಶಿರೇಂದ್ರ ಪ್ರಭು ಮತ್ತು ಶ್ರೀ ಮಾಣಿಕ್ ಶಿವಪ್ಪ ಬಾಲ್ಕೆ ಇವರುಗಳನ್ನು ಪ್ರಸ್ತಾಪಿಸಲಾಗಿತ್ತು. ಆದರೆ ಇತಿಹಾಸ ವಿಷಯದಲ್ಲಿ 32 ಗಂಟೆಗಳ ಕಾರ್ಯಭಾರ ಇಲ್ಲದೇ ಇದ್ದ ಪ್ರಯುಕ್ತ ಒಂದು ಉಪನ್ಯಾಸಕರ ಹುದ್ದೆ ಮಂಜೂರು ಮಾಡಬಹುದಾಗಿದ್ದರಿಂದ, ಸದರಿ ಹುದ್ದೆಯ ಎದುರು ಶ್ರೀ ಶಿರೇಂದ್ರ ಪ್ರಭು ಇವರನ್ನು ವೇತನಾನುದಾನದ ವ್ಯಾಪ್ತಿಗೆ ಮೇಲೆ ಓದಲಾದ (5)ರ ಆದೇಶದಲ್ಲಿ ಒಳಪಡಿಸಲಾಗಿತ್ತು. ಮೇಲೆ ಓದಲಾದ (5)ರ ಆದೇಶ ಹೊರಡಿಸುವ ಪೂರ್ವದಲ್ಲಿಯೇ ಶ್ರೀ ಶಿರೇಂದ್ರ ಪ್ರಭು ಇವರು ಇತಿಹಾಸ ಉಪನ್ಯಾಸಕರ ಹುದ್ದೆಗೆ ರಾಜೀನಾಮೆ ನೀಡಿ ಅದನ್ನು ಆಡಳಿತ ಮಂಡಳಿಯು ಅಂಗೀಕರಿಸಿರುವ ಕಾರಣ ಇತಿಹಾಸ ವಿಷಯದಲ್ಲಿ ಮಂಜೂರಾಗಿರುವ ಒಂದು ಅನುದಾನಿತ ಹುದ್ದೆಯ ಎದುರು ಶ್ರೀ ಮಾಣಿಕ್ ಶಿವಪ್ಪ ಬಾಲ್ಕೆ ಇವರನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲು ಮೇಲೆ ಓದಲಾದ (4)ರ ದಿನಾಂಕ : 28–10–2011ರ ಪತ್ರದಲ್ಲಿ ಕಾಲೇಜು ಶಿಕ್ಷಣ ಆಯುಕ್ತರು ಇತಿಹಾಸ ವಿಷಯದಲ್ಲಿ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಮಾಣಿಕ್ ಶಿವಪ್ಪ ಬಾಲ್ಕೆ ಇವರನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲು ವರದಿ ನೀಡಿರುವ ಹಿನ್ನೆಲೆಯಲ್ಲಿ ಪ್ರಸ್ತಾವನೆ ಪರಿಶೀಲಿಸಲಾಯಿತು. ಸದರಿಯವರು ದಿನಾಂಕ : 11–7–2009ರ ಪೂರ್ವದಲ್ಲಿ ಎಂ.ಫಿಲ್. ಪದವಿಯನ್ನು ಪಡೆದಿರುವ ಹಿನ್ನೆಲೆಯಲ್ಲಿ ಅವರನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲು ತೀರ್ಮಾನಿಸಲಾಗಿದೆ.

ಆದ್ದರಿಂದ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ : ಇಡಿ 137 ಯುಪಿಸಿ 2010, ಬೆಂಗಳೂರು, ದಿನಾಂಕ : 25–11–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಆಡಳಿತ ಮಂಡಳಿಗಳಿಗೆ ಸೇರಿದ ಶಿಕ್ಷಣ ಸಂಸ್ಥೆಗಳ ವತಿಯಿಂದ ದಿನಾಂಕ : 1–6–1987 ರಿಂದ 31–3–1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲ್ಪಡುತ್ತಿರುವ ಸಿದ್ಧಾರ್ಥ ಕಲಾ ಮತ್ತು ವಾಣಿಜ್ಯ ಪದವಿ ಕಾಲೇಜು, ಬೀದರ್ ಇಲ್ಲಿ ಈಗಾಗಲೇ ಮಂಜೂರಾಗಿರುವ ಒಂದು ಇತಿಹಾಸ ಉಪನ್ಯಾಸಕರ ಹುದ್ದೆಯ ಎದುರು ಈ ಕೆಳಕಂಡ ಸಹಾಯಕ ಪ್ರಾಧ್ಯಾಪಕರನ್ನು ಕೆಳಕಂಡ ಷರತ್ತಿಗೊಳಪಟ್ಟು ಈ ಆದೇಶ ಹೊರಡಿಸಿದ ದಿನಾಂಕದಿಂದ ಆರ್ಥಿಕ ಸೌಲಭ್ಯದೊಂದಿಗೆ ಜಾರಿಗೆ ಬರುವಂತೆ ವೇತನಾನುದಾನದ ವ್ಯಾಪ್ತಿಗೆ ತರಲಾಗಿದೆ.

| ಕ್ರಮ ಸಂಖ್ಯೆ | ವೇತನಾನುದಾನಕ್ಕೆ ಒಳಪಡಿಸಿದ ಬೋಧಕರ ಹೆಸರು | ವೇತನಾನುದಾನಕ್ಕೆ ಒಳಪಡಿಸಿದ ಹುದ್ದೆ/ವಿಷಯ | ಪರಿಗಣಿಸಲಾದ ಮೀಸಲಾತಿ | ಕಾರ್ಯಭಾರ | ವೇತನ ಶ್ರೇಣಿ |
|---|---|---|---|---|---|
| 1 | ಶ್ರೀ ಮಾಣಿಕ್ ಶಿವಪ್ಪ ಬಾಲ್ಕೆ | ಇತಿಹಾಸ | ಅನ್ವಯಿಸುವುದಿಲ್ಲ | 22 ಗಂಟೆ | ಯುಜಿಸಿ |

1. ಒಂದು ವೇಳೆ ಈ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಟ್ಟ ಬೋಧಕರುಗಳ ಪೈಕಿ ಯಾವುದೇ ಅನರ್ಹತೆ ಕಂಡು ಬಂದಲ್ಲಿ ಯಾವುದೇ ಮುನ್ಸೂಚನೆಯಿಲ್ಲದೆ ವೇತನಾನುದಾನವನ್ನು ಹಿಂದಕ್ಕೆ ಪಡೆಯುವ ಷರತ್ತಿಗೊಳಪಟ್ಟಿದೆ.

2. ಈ ನೇಮಕಾತಿಗಳಲ್ಲಿ ಮೀಸಲಾತಿಯಲ್ಲಿ ವ್ಯತ್ಯಾಸವಾಗಿರುವುದು ಕಂಡುಬಂದಲ್ಲಿ ಅಂಥವರ ವೇತನಾನುದಾನವನ್ನು ಸಹ ಹಿಂದಕ್ಕೆ ಪಡೆಯುವ ಷರತ್ತಿಗೊಳಪಟ್ಟಿದೆ.

3. ವೇತನಾನುದಾನದ ವ್ಯಾಪ್ತಿಗೆ ಒಳಪಟ್ಟಂತಹ ಮೇಲ್ಕಂಡ ಉಪನ್ಯಾಸಕರುಗಳ ವೇತನವನ್ನು ಆದೇಶ ಹೊರಡಿಸಿದ ದಿನಾಂಕದಿಂದ ವಿಸ್ತರಿಸಿರುವ ವೇತನ ಶ್ರೇಣಿಯ ಕನಿಷ್ಠ ಮೂಲ ವೇತನದಲ್ಲಿ ನಿಗದಿ ಪಡಿಸತಕ್ಕದ್ದು. ಹಾಗೂ ವೇತನಾನುದಾನ ವ್ಯಾಪ್ತಿಗೆ ಒಳಪಡಿಸಲಾದ ಪೂರ್ವದಲ್ಲಿ ಸಲ್ಲಿಸಿರುವ ಸೇವೆಯನ್ನು ಯಾವುದೇ ಸೇವಾ ಹಾಗೂ ಪಿಂಚಣಿ ಸೌಲಭ್ಯಗಳಿಗೆ ಪರಿಗಣಿಸುವಂತಿಲ್ಲ.

4. ದಿನಾಂಕ : 11–7–2009ರ ಪೂರ್ವದಲ್ಲಿ ನೇಮಕಾತಿ ಹೊಂದಿದವರು ಎಂ.ಫಿಲ್. ಪದವಿ ಹೊಂದಿದ್ದಲ್ಲಿ ಯುಜಿಸಿ ವೇತನ ಶ್ರೇಣಿ ನೀಡಲು ಪರಗಣಿಸಲಾಗುತ್ತಿದೆ. ಆದರೆ, ಈ ಪ್ರಕರಣದಲ್ಲಿ ಬಹುತೇಕ ಉಪನ್ಯಾಸಕರುಗಳು ದಿನಾಂಕ : 11–7–2009ರ ಪೂರ್ವದಲ್ಲಿ ನಡೆದ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದು ಅವರುಗಳ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ವಿಶ್ವವಿದ್ಯಾಲಯಗಳು ದಿನಾಂಕ : 11–7–2009ರ ನಂತರ ವಿತರಿಸಿದೆ. ಈ ಹಿನ್ನೆಲೆಯಲ್ಲಿ ಅವರುಗಳಿಗೆ ಯುಜಿಸಿ ವೇತನ ಶ್ರೇಣಿ ವಿಸ್ತರಿಸುವ ಸಂಬಂಧ ಯಾವ ದಿನಾಂಕವನ್ನು ಅಂದರೆ ಪರೀಕ್ಷೆ ನಡೆದ ದಿನಾಂಕ ಅಥವಾ ಪ್ರಮಾಣ ಪತ್ರ ವಿತರಿಸಿರುವ ದಿನಾಂಕ ಈ ಎರಡರಲ್ಲಿ ಯಾವ ದಿನಾಂಕ ಪರಿಗಣಿಸಬೇಕು ಎಂಬುದರ ಕುರಿತು ಪರಿಷ್ಕರಿಸುವ ಷರತ್ತಿಗೊಳಪಟ್ಟಿರುತ್ತದೆ.

5. ವೇತನಾನುದಾನ ವ್ಯಾಪ್ತಿಗೆ ತರಲಾದ ಉಪನ್ಯಾಸಕರುಗಳ ಕಾರ್ಯಭಾರದಲ್ಲಿ ಕೊರತೆ ಉದ್ಭವಿಸಿದ ಪಕ್ಷದಲ್ಲಿ ಅಂತಹ ಉಪನ್ಯಾಸಕರುಗಳನ್ನು ಕಾರ್ಯಭಾರ ಇರುವಂತಹ ಅನುದಾನಿತ ಕಾಲೇಜು/ಸರ್ಕಾರಿ ಕಾಲೇಜುಗಳ ಕಾರ್ಯಭಾರದ ಎದುರಾಗಿ ನಿಯೋಜನೆ ಮೇಲೆ ಮರು ಹಂಚಿಕೆ ಮಾಡುವ ಷರತ್ತಿಗೊಳಪಟ್ಟಿದೆ.

6. ಸಂಸ್ಥೆಯ ಬೈಲಾದಲ್ಲಿ ನಿಗಧಿಪಡಿಸಿರುವಂತೆ ಆಡಳಿತ ಮಂಡಳಿಯ ಎಲ್ಲಾ ಪದಾಧಿಕಾರಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರೇ ಆಗಿರಬೇಕು. ಒಂದು ವೇಳೆ ಅನ್ಯ ವರ್ಗದ ವ್ಯಕ್ತಿಯನ್ನು ಆಡಳಿತ ಮಂಡಳಿಯ ಪದಾಧಿಕಾರಿಗಳಾಗಿ ಆಯ್ಕೆ ಮಾಡಿದ್ದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

7. ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು, 2003ರ ನಿಯಮ 15(ಇ)ರಡಿಯಲ್ಲಿ ನಿಗದಿಪಡಿಸಿರುವ ಅಪೆಂಡಿಕ್ಸ್ (2) ರಲ್ಲಿ ಸೂಚಿಸಿರುವಂತೆ ಬೋಧನಾ ಕೊಠಡಿಗಳು, ಪ್ರಯೋಗಾಲಯಗಳು, ಶೌಚಾಲಯ ಇತ್ಯಾದಿಗಳನ್ನು ಒಳಗೊಂಡ ಮೂಲಭೂತ ಸೌಕರ್ಯಗಳನ್ನು ಸಂಸ್ಥೆಯು ಒದಗಿಸಿರತಕ್ಕದ್ದು.

8. ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದವರು ನಡೆಸುತ್ತಿರುವ ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸುವ ಸಂದರ್ಭದಲ್ಲಿ ಅಂತಹ ಕಾಲೇಜುಗಳಲ್ಲಿ ಒಟ್ಟು ವಿದ್ಯಾರ್ಥಿಗಳ ಸಂಖ್ಯೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳು ಕನಿಷ್ಠ ಶೇಕಡಾ 35 ರಷ್ಟು ಇರತಕ್ಕದ್ದು. ಪ್ರವೇಶಾವಕಾಶದಲ್ಲಿ ನಿಗದಿಪಡಿಸಿರುವ ವಿದ್ಯಾರ್ಥಿಗಳ ಕನಿಷ್ಠ ಪ್ರಮಾಣವನ್ನು ವಿವರವಾಗಿ ಅನುಸರಿಸತಕ್ಕದ್ದು. ತಪ್ಪಿದಲ್ಲಿ ವೇತನಾನುದಾನ ಹಿಂಪಡೆಯು ಷರತ್ತಿಗೊಳಪಟ್ಟಿದೆ.

9. ವಿಶ್ವವಿದ್ಯಾಲಯದವರು ನಿಗದಿಪಡಿಸಿರುವ ಸರಾಸರಿ ಪ್ರವೇಶಾತಿಗೆ ಸಮಾನಾಂತರವಾಗಿ ಈ ಕಾಲೇಜುಗಳು ಕನಿಷ್ಠ ಪ್ರವೇಶಾತಿಯನ್ನು ಮಾಡಿಕೊಳ್ಳತಕ್ಕದ್ದು ಮತ್ತು ಪ್ರವೇಶಾತಿ (enrollment) ಪಡೆದ ಕಾಲೇಜಿನ ವಿದ್ಯಾರ್ಥಿಗಳ ಪೈಕಿ ಕನಿಷ್ಠ ಶೇಕಡ 75 ರಷ್ಟು ವಿದ್ಯಾರ್ಥಿಗಳು ಪರೀಕ್ಷೆಗೆ ಕುಳಿತುಕೊಳ್ಳುವಂತೆ ಕ್ರಮವಹಿಸತಕ್ಕದ್ದು. ತಪ್ಪಿದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

10. ಇಂತಹ ಕಾಲೇಜುಗಳಲ್ಲಿನ ಪರೀಕ್ಷಾ ಫಲಿತಾಂಶಗಳು ಸಂಬಂಧಪಟ್ಟ ವಿಶ್ವವಿದ್ಯಾಲಯದ ಮಾನ್ಯತೆ ಪಡೆದ ಇತರೆ ಕಾಲೇಜುಗಳಲ್ಲಿನ ಸರಾಸರಿ ಫಲಿತಾಂಶಕ್ಕಿಂತ ಕಡಿಮೆ ಇರತಕ್ಕದಲ್ಲ. ತಪ್ಪಿದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

11. ಈ ರೀತಿ ಸಕ್ಷಮ ಪ್ರಾಧಿಕಾರದಿಂದ ಅನುಮತಿ ಪಡೆದು ಪ್ರಾರಂಭವಾದ ಪದವಿ ಕಾಲೇಜುಗಳನ್ನು ಮಧ್ಯದಲ್ಲಿ ಯಾವುದೇ ವಿಚ್ಛಿನ್ನತೆ ಇಲ್ಲದೆ ಸತತವಾಗಿ ನಡೆಸಿರಬೇಕು. ವಿಚ್ಛಿನ್ನತೆ ಉಂಟಾದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

12. ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು 2003ರ ಮತ್ತು ಇತರ ಸಂಬಂಧಿತ ನಿಯಮಗಳಡಿಯಲ್ಲಿ ನಿಗಧಿಪಡಿಸಿರುವಂತೆ ಮಾದರಿ ಸಿಬ್ಬಂದಿಯನ್ವಯ ನೇಮಕಾತಿ ಮಾಡಿಕೊಳ್ಳತಕ್ಕದ್ದು. ಪ್ರತಿಯೊಂದು ತರಗತಿಯಲ್ಲಿ ನಿಗಧಿತ ಕನಿಷ್ಠ ಮಟ್ಟದ ವಿದ್ಯಾರ್ಥಿ ಹಾಜರಾತಿ ಸಂಖ್ಯಾಬಲವನ್ನು ಹೊಂದಿರತಕ್ಕದ್ದು. ಪದವಿ ಕಾಲೇಜುಗಳಿಗೆ ಸಂಬಂಧಪಟ್ಟಂತೆ ಪ್ರತಿಯೊಂದು ತರಗತಿಯಲ್ಲಿ ಕನಿಷ್ಠ 40 ವಿದ್ಯಾರ್ಥಿಗಳ ಹಾಜರಾತಿ ಕಡ್ಡಾಯವಾಗಿರಬೇಕು. ಭಾಷಾ ವಿಷಯದಲ್ಲಿ ಕನಿಷ್ಠ 10 ವಿದ್ಯಾರ್ಥಿಗಳು ಹಾಗೂ ಐಚ್ಛಿಕ ವಿಷಯಗಳಿಗೆ ಕನಿಷ್ಠ 15 ವಿದ್ಯಾರ್ಥಿಗಳ ಸಂಖ್ಯೆ ಇರಬೇಕು.

13. ನಿಗಧಿತ ಮೂಲಭೂತ ಸೌಲಭ್ಯಗಳಲ್ಲದೆ ಸ್ವಂತ ಕಟ್ಟಡ ಮತ್ತು ಆಟದ ಮೈದಾನಗಳನ್ನು ಹೊಂದಿರತಕ್ಕದ್ದು. ಇವುಗಳನ್ನು ಹೊಂದದೇ ಇರುವ ಸಂಸ್ಥೆಗಳ ಪ್ರಕರಣಗಳಲ್ಲಿ ಈ ಮೂಲಭೂತ ಸೌಲಭ್ಯಗಳನ್ನು ಹೊಂದಲು ಸಹಾಯಾನುದಾನಕ್ಕೆ ಒಳಪಡಿಸಿದ ದಿನಾಂಕದಿಂದ ಮೂರು ವರ್ಷಗಳ ಕಾಲಾವಕಾಶ ನೀಡಬಹುದು. ಹಾಗೂ ಮೂರು ವರ್ಷಗಳ ನಂತರವೂ ಈ ಸೌಲಭ್ಯಗಳನ್ನು ಒದಗಿಸದೇ ಇದ್ದಲ್ಲಿ ಸಹಾಯಾನುದಾನವನ್ನು ನಿಲ್ಲಿಸಲಾಗುವುದು.

14. ಇನ್ನು ಮುಂದೆ ಭವಿಷ್ಯಾನುಸಾರ ಭರ್ತಿ ಮಾಡಬೇಕಾಗಿರುವ ಹುದ್ದೆಗಳಿಗೆ ಸಕ್ಷಮ ಅಧಿಕಾರಿಯಿಂದ ಪೂರ್ವಾನುಮತಿ ಪಡೆಯದೇ ಮಾಡತಕ್ಕದ್ದಲ್ಲ.

15. ನೇರ ನೇಮಕಾತಿ, ಬಡ್ತಿ ಮತ್ತು ವಿದ್ಯಾರ್ಥಿಗಳ ಪ್ರವೇಶದ ವಿಷಯದಲ್ಲಿ ಕಾಲಕಾಲಕ್ಕೆ ಹೊರಡಿಸುವ ಸರ್ಕಾರದ ನಿಯಮಗಳು/ಆದೇಶಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

16. ಸದರಿ ಕಾಲೇಜಿನಲ್ಲಿ ಇನ್ನು ಮುಂದೆ ನೌಕರರ ರಾಜೀನಾಮೆ, ನಿವೃತ್ತಿ ಮತ್ತು ನಿಧನದಿಂದ ತೆರವಾದ ಬೋಧಕ ಹುದ್ದೆಗಳನ್ನು ತುಂಬುವಾಗ ಸರ್ಕಾರದ ಪೂರ್ವಾನುಮತಿ ಪಡೆಯುವುದು ಮತ್ತು ಸರ್ಕಾರದ ಮೀಸಲಾತಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

17. ಅನುಮೋದಿತ ಹುದ್ದೆಗಳಿಗೆ ವೇತನಾನುದಾನ ಬಿಡುಗಡೆ ಮಾಡುವ ಮುನ್ನ ಸರ್ಕಾರದ ಮತ್ತು ಯುಜಿಸಿ ನಿಯಮಗಳ ಪ್ರಕಾರ ವಯೋಮಿತಿ, ವಿದ್ಯಾರ್ಹತೆ ಮತ್ತಿತರ ಷರತ್ತುಗಳನ್ನು ಪೂರೈಸಿರುವ ಬಗ್ಗೆ ಖಚಿತಪಡಿಸಿಕೊಳ್ಳತಕ್ಕದ್ದು.

18. ಸದರಿ ಕಾಲೇಜಿನಲ್ಲಿ ವೇತನಾನುದಾನಕ್ಕೆ ಒಳಪಡಿಸಲಾಗಿರುವಂತಹ ಬೋಧಕರ ವೇತನವನ್ನು ಪ್ರಥಮ 5 ವರ್ಷಗಳ ಅವಧಿಗೆ ಇಲಾಖೆಗೆ ನಿಗದಿ ಪಡಿಸಲಾದ ಯೋಜನೆ ಹಂಚಿಕೆಯಲ್ಲಿಯೇ ವೆಚ್ಚ ಭರಿಸತಕ್ಕದ್ದು.

ಪ್ರತೀ ವರ್ಷವೂ ಮೇಲ್ಕಂಡ ಷರತ್ತುಗಳನ್ನು ಪೂರೈಸಿರುವ ಕುರಿತು ಸಂಬಂಧಪಟ್ಟ ಜಂಟಿ ನಿರ್ದೇಶಕರು ದೃಢೀಕರಿಸಿದ ನಂತರವೇ ಆಯಾ ವರ್ಷದ ವೇತನಾನುದಾನ ಬಿಡುಗಡೆ ಮಾಡುವಂತೆ ಆಯುಕ್ತಾಲಯಕ್ಕೆ ಸೂಚಿಸಲಾಗಿದೆ. ನ್ಯೂನ್ಯತೆಗಳಾದಲ್ಲಿ ಸಂಬಂಧಪಟ್ಟ ಜಂಟಿ ನಿರ್ದೇಶಕರೇ ಜವಾಬ್ದಾರರಾಗಿರುತ್ತಾರೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ:861/ವೆಚ್ಚ-8/2011, ದಿನಾಂಕ : 31-3-2011 ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಯು.ಬಿ. ಉಳವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 2742 ಶಿಕ್ಷಣ ಇಲಾಖೆ (ಕಾಲೇಜು ಶಿಕ್ಷಣ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎ. ಮರೀಗೌಡ ಕೆ.ಎ.ಎಸ್. (ಕಿರಿಯ ಶ್ರೇಣಿ), ಹಿಂದಿನ ಉಪ ನಿರ್ದೇಶಕರು, ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ, ರಾಮನಗರ ಜಿಲ್ಲೆ, ರಾಮನಗರ ಇವರ ವಿರುದ್ಧ ಲಂಚ ವಿರೋಧ ಕಾಯ್ದೆ, 1988 ರಡಿ ದಾಖಲಾದ ಪ್ರಕರಣದ ಅಭಿಯೋಜನಾ ಮಂಜೂರಾತಿ ಪರಿಷ್ಕೃತ ಆದೇಶ.

**ಓದಲಾಗಿದೆ :** 1)ಆರಕ್ಷಕ ಉಪಾಧೀಕ್ಷಕರು ಹಾಗೂ ತನಿಖಾಧಿಕಾರಿಗಳು, ಕರ್ನಾಟಕ ಲೋಕಾಯುಕ್ತ, ರಾಮನಗರ ಜಿಲ್ಲೆ, ರಾಮನಗರ ಇವರ ಅಂತಿಮ ವರದಿ ಸಂಖ್ಯೆ: ಕಲೋ/ರಾಜಿ/ಮೊಸಂ 03/2009 (ಅಂತಿಮ ವರದಿ), ದಿನಾಂಕ: 10-12-10.

2) ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ದಿನಾಂಕ: 20-01-11 ರ ಪತ್ರ ಸಂಖ್ಯೆ: (Lok/INV(G)/BD-33/Crime-33/CR-03/2009/ ರಾಮನಗರ.

3) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ದಿನಾಂಕ: 17-10-11 ರ ಪತ್ರ ಸಂಖ್ಯೆ: (Lok/INV(G)/BD-33/CR-03/2009/ ರಾಮನಗರ.

**ಪ್ರಸ್ತಾವನೆ :**

ಶ್ರೀ ಎ. ಮರೀಗೌಡ, ಕೆಎಎಸ್ (ಕಿರಿಯ ಶೇಣಿ), ಹಿಂದಿನ ಉಪ ನಿರ್ದೇಶಕರು, ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ, ರಾಮನಗರ ಜಿಲ್ಲೆ, ರಾಮನಗರ ಇವರ ವಿರುದ್ಧ ಮೊಕದ್ದಮೆ ಸಂಖ್ಯೆ: 03/2009 ರಲ್ಲಿ ಕರ್ನಾಟಕ ಲೋಕಾಯುಕ್ತ, ರಾಮನಗರ ಜಿಲ್ಲಾ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರ ದಿನಾಂಕ: 20-01-11 (ಮೇಲೆ ಓದಲಾದ ಕ್ರಮ ಸಂಖ್ಯೆ-2) ರೊಂದಿಗೆ ಕಳುಹಿಸುತ್ತಾ, ಆಪಾದಿತನನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ, 1988 ರ 19 ಕಲಂನಡಿ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ.

2. ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು, ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರ ಸಂಖ್ಯೆ: Lok/INV(G)/BD-33/Crime-33/CR-03/2009 ರಾಮನಗರ, ದಿನಾಂಕ: 20-01-11 ರೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1. ಶ್ರೀ ಜಿ.ಎಸ್. ವಿಶಾಲಾಕ್ಷ @ ರವಿ ಬಿನ್ ಜಿ ಎಸ್ ಸಿದ್ದಯ್ಯ ನ್ಯಾಯಬೆಲೆ ಅಂಗಡಿ ವ್ಯಾಪಾರ, ವಾಸ: ಗಬ್ಬಾಡಿ ಗ್ರಾಮ, ಹಾರೋಹಳ್ಳಿ ಹೋಬಳಿ, ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆರವರ ಫಿರ್ಯಾದಿ ದಿನಾಂಕ: 03-06-09.
2. ಪ್ರಥಮ ವರ್ತಮಾನ ವರದಿ ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ರಾಮನಗರ ಪ್ರಕರಣ ಸಂಖ್ಯೆ: 03/2009, ದಿನಾಂಕ: 03-06-09.
3. ಪ್ರಾಯೋಗಿಕ ಪಂಚನಾಮೆ ದಿನಾಂಕ: 03-06-09
4. ಟ್ರ್ಯಾಪ್ ಮಹಜರ್ ದಿನಾಂಕ: 03-06-09
5. ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ: (PHI/CME/LOK/76/09-10. Dt. 19-08-09
6. ಕೃತ್ಯ ನಡೆದ ಸ್ಥಳದ ನಕಾಶೆ
7. ಸಾಕ್ಷಿಗಳ ಹೇಳಿಕೆಗಳು: (1) ಶ್ರೀ ವಿಶಾಲಾಕ್ಷ @ ರವಿ, ಫಿರ್ಯಾದುದಾರರು (2) ಶ್ರೀ ಪಿ ಸುನೀಲ್‌ಕುಮಾರ್, ನೆರಳು ಸಾಕ್ಷಿದಾರರು (3) ಶ್ರೀ ಟಿ. ಹೆಚ್. ನಿರಂಜನಗೌಡ, ಪಂಚ ಸಾಕ್ಷಿದಾರರು (4) ಶ್ರೀ ಆರ್. ರಂಗಯ್ಯ (5) ಶ್ರೀ ಸಿ. ಪರಶಿವಮೂರ್ತಿ (6) ಶ್ರೀ ಜೆ.ಎಸ್. ಸಿದ್ದಯ್ಯ (7) ಶ್ರೀ ಪಿ ಕುಮಾರ್ (8) ಶ್ರೀ ಶ್ಯಾಮು (9) ಶ್ರೀ ರವಿ ತಿರ್ಲಾಪುರ (10) ಶ್ರೀ ರಾಮಣ್ಣ (11) ಶ್ರೀ ಅಪ್ಸರ್ ಪಾಷ (12) ಶ್ರೀ ಬಿ.ಜಿ. ಶೇಷಗಿರಿ, ಸಹಾಯಕ ರಾಸಾಯನಿಕ ತಜ್ಞರು (13) ಶ್ರೀ ಪುರ್ಲಿ, ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು (14) ಶ್ರೀ ಕಾಶಿರಾಂ ಪವಾರ್, ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು (15) ಶ್ರೀ ಡಿ ಪಿ ಪ್ರಸನ್ನ (16) ಶ್ರೀ ಬಿ. ಶಿವಕುಮಾರಸ್ವಾಮಿ, ಸಿಹೆಚ್‌ಸಿ (17) ಶ್ರೀ ಎಸ್ ಟಿ ಬೋರೇಗೌಡ, ಸಿಪಿಸಿ (18) ಶ್ರೀ ಹೆಚ್.ಕೆ. ಸುರೇಶ್, ಸಿಪಿಸಿ (19) ಶ್ರೀಮತಿ ಶಶಿಕಲ, ಮಹಿಳಾ ಪಿಸಿ (20) ಶ್ರೀ ಡಿ. ಕೃಷ್ಣಮೂರ್ತಿ, ಸಿಪಿಸಿ ಮತ್ತು (21) ಶ್ರೀ ಕೆ. ಬೀರಯ್ಯ, ಸಿಪಿಸಿ
8. ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆಗಳ ಸಂಖ್ಯೆ: 14 (ತನಿಖಾ ವರದಿಯ D-10) ವಿಷಯ: ಫಿರ್ಯಾದುದಾರರ ತಂದೆಯ ಹೆಸರಿನಲ್ಲಿರುವ ನ್ಯಾಯಬೆಲೆ ಅಂಗಡಿಯ ಲೈಸನ್ಸನ್ನು ಅಮಾನತ್ತುಪಡಿಸುವ ಬಗ್ಗೆ.

9. ಆಪಾದಿತರ ಸಮಜಾಯಿಷಿ ಹೇಳಿಕೆಗಳು: ಶ್ರೀ ಎ. ಮರೀಗೌಡ (ತನಿಖಾ ವರದಿಯ D-8)

3. ತನಿಖಾಧಿಕಾರಿಗಳಾದ ಶ್ರೀ ಹೆಚ್. ಮಂಜಪ್ಪ, ಪೊಲೀಸ್ ಉಪಾಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ರಾಮನಗರ ಜಿಲ್ಲೆ, ರಾಮನಗರ ಇವರು ಶ್ರೀ ಎ. ಮರೀಗೌಡ, ಹಿಂದಿನ ಉಪ ನಿರ್ದೇಶಕರು, ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ, ರಾಮನಗರ ಜಿಲ್ಲೆ, ರಾಮನಗರ ರವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ, ರಾಮನಗರ ಜಿಲ್ಲಾ ಪೊಲೀಸು ಠಾಣೆಯಲ್ಲಿ ಗುನ್ನೆ ಸಂಖ್ಯೆ: 03/2009 ರಲ್ಲಿ ಲಂಚ ನಿರೋಧಕ ಕಾಯ್ದೆ, 1988 ರ ಕಲಂ 7, 13(1)(d) ರ ಜೊತೆಯಲ್ಲಿ ಓದಲಾದ ಕಲಂ 13(2)ರಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

4. ಆಪಾದಿತರಾದ ಶ್ರೀ ಎ ಮರೀಗೌಡ, ಹಿಂದಿನ ಉಪ ನಿರ್ದೇಶಕರು, ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ ಇವರು ಫಿರ್ಯಾದಿಯಾದ ಶ್ರೀ ಜಿ ಎಸ್ ವಿಶಾಲಾಕ್ಷ @ ರವಿ ಬಿನ್ ಜಿ ಎಸ್ ಸಿದ್ದಯ್ಯ, ನ್ಯಾಯಬೆಲೆ ಅಂಗಡಿ ವ್ಯಾಪಾರ, ವಾಸ: ಗಬ್ಬಾಡಿ ಗ್ರಾಮ, ಹಾರೋಹಳ್ಳಿ, ಹೋಬಳಿ, ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ ಇವರ ನ್ಯಾಯ ಬೆಲೆ ಅಂಗಡಿಯ ಲೈಸೆನ್ಸನ್ನು ಅಮಾನತ್ತುಪಡಿಸದಿರುವ ಸರ್ಕಾರಿ ಕೆಲಸವನ್ನು ಮಾಡಲು ರೂ. 10000-00 (ಹತ್ತು ಸಾವಿರ ರೂಪಾಯಿಗಳು) ಗಳ ಅಕ್ರಮ ಸಂಭಾವನೆಯನ್ನು ಕೇಳಿರುತ್ತಾರೆ. ಫಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸಾರ್ವಜನಿಕ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿದ್ದು ಇರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ವ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ: 03-06-2009 ರಂದು ಬೆಂಗಳೂರು-ಮೈಸೂರು ರಸ್ತೆ, ಲೋಕರುಚಿ (ಕಾಮತ್) ಹೋಟಲ್ ಕಾಂಪೌಂಡ್ ಬಳಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ ಶ್ರೀ ಎ. ಮರೀಗೌಡ, ಹಿಂದಿನ ಉಪ ನಿರ್ದೇಶಕರು, ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ, ರಾಮನಗರ ಜಿಲ್ಲೆ, ರಾಮನಗರ ಇವರು ಅಕ್ರಮ ಸಂಭಾವನೆಯಾದ ರೂ. 10000-00 ಗಳನ್ನು ಸದರಿ ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾದಿತ ಸಾರ್ವಜನಿಕ ಅಧಿಕಾರಿಯ ಬಲಗೈ ಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಫಿನಾಪ್ತಲೀನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸಾರ್ವಜನಿಕ ಅಧಿಕಾರಿ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ. 10000-00 ಗಳನ್ನು ಶ್ರೀ ಎ. ಮರೀಗೌಡರನ್ನು ತನಿಖಾ ತಂಡವು ಹಿಡಿದುಕೊಂಡ ಕೂಡಲೇ ಆರೋಪಿತರು ಲಂಚದ ಹಣವನ್ನು ತಮ್ಮ ಜೀಪಿನ ಸೀಟಿನ ಕೆಳಗೆ ಎಸೆದಿದ್ದುದನ್ನು ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

5. ಮೇಲ್ಕಂಡ ತನಿಖಾ ವರದಿ ಹಾಗೂ ಸಾಕ್ಷ್ಯಾಧಾರಗಳನ್ನು ಸಕ್ಷಮ ಪ್ರಾಧಿಕಾರವು ಕೂಲಂಕಷವಾಗಿ ಪರಿಶೀಲಿಸಿದೆ ಫಿರ್ಯಾದಿಯು ಆರೋಪಿ ಶ್ರೀ ಮರಿಗೌಡರವರೊಂದಿಗೆ ಮತ್ತು ಪ್ರಕರಣದ ಸಾಕ್ಷಿ ಶ್ರೀ ಸಿ. ಪರಶಿವಮೂರ್ತಿರವರೊಂದಿಗೆ ನಡೆಸಿದ ದೂರವಾಣಿ ಸಂಭಾಷಣೆಯಿಂದ ಆರೋಪಿತ ಅಧಿಕಾರಿಯು ಲಂಚದ ಹಣಕ್ಕೆ ಬೇಡಿಕೆ ಇಟ್ಟಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಅಲ್ಲದೆ ಆರೋಪಿತ ಅಧಿಕಾರಿಯು, ಲಂಚದ ಹಣವನ್ನು ತನ್ನ ಕೈಯಿಂದ ಪಡೆದಿದ್ದಾಗ, ತನಿಖಾ ತಂಡವು ಹಿಡಿದುಕೊಂಡಾಗ ಹಣವನ್ನು ಜೀಪು ಸೀಟಿನ ಕೆಳಭಾಗಕ್ಕೆ ಎಸೆದಿರುವುದನ್ನು ಗಮನಿಸಿದಲ್ಲಿ, ಅಕ್ರಮ ಹಣವನ್ನು ಪಡೆದಿರುವುದು ದೃಢಪಡುತ್ತದೆ ಹಾಗೂ ಕಂಡಿಕೆ 2 ರಲ್ಲಿರುವ ಪೂರಕ ದಾಖಲೆಗಳನ್ನು ಪರಿಶೀಲಿಸಿದ ನಂತರ ಶ್ರೀ ಎ ಮರೀಗೌಡರವರನ್ನು ಲಂಚ ನಿರೋಧಕ ಕಾಯ್ದೆಯಡಿ ಅಭಿಯೋಜನೆಗೆ ಒಳಪಡಿಸಲು ಸಮರ್ಥನೀಯ ಕಾರಣಗಳು ಇರುವುದನ್ನು ಸರ್ಕಾರವು ಮನಗಂಡಿರುತ್ತದೆ.

6. ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧಕ ಕಾಯ್ದೆ, 1988 ರ ಕಲಂ 7, 13(1)(d) ರ ಜೊತೆಗೆ ಓದಲಾದ ಕಲಂ 13(2) ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ, ಇವರನ್ನು ಲಂಚ ನಿರೋಧ ಕಾಯ್ದೆ, 1988 ರ ಕಲಂ 7, 13(1)(d) ರ ಜೊತೆಗೆ ಓದಲಾದ ಕಲಂ 13(2) ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರವು ಭಾವಿಸಿದೆ.

7. ಸಕ್ಷಮ ಪ್ರಾಧಿಕಾರವಾದ ಸರ್ಕಾರವು, ಆಪಾದಿತನನ್ನು ಕೆಲಸದಿಂದ ತೆಗೆದು ಹಾಕಲು ಅಧಿಕಾರವುಳ್ಳದ್ದಾಗಿರುತ್ತದೆ. ಆದ್ದರಿಂದ, ಲಂಚ ನಿರೋಧ ಕಾಯ್ದೆ, 1988 ರ ಕಲಂ 19(ಸಿ) ರ ಅಡಿ ಆಪಾದಿತ ಸಾರ್ವಜನಿಕ ಅಧಿಕಾರಿ ಶ್ರೀ ಎ. ಮರೀಗೌಡ, ಕೆಎಎಸ್ (ಕಿರಿಯ ಶ್ರೇಣಿ), ಹಿಂದಿನ ಉಪ ನಿರ್ದೇಶಕರು, ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ, ರಾಮನಗರ ಜಿಲ್ಲೆ, ರಾಮನಗರ ರವರನ್ನು ಕಲಂ 7 ಮತ್ತು 13(1)(d) ರ ಜೊತೆಗೆ ಓದಲಾದ ಕಲಂ 13(2) ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

8. ಮೇಲ್ಕಂಡ ಪ್ರಸ್ತಾವನೆಯಂತೆ, ಶ್ರೀ ಎ ಮರೀಗೌಡ, ಕೆಎಎಸ್ (ಕಿರಿಯ ಶ್ರೇಣಿ) ಇವರನ್ನು ದಿನಾಂಕ: 21-09-11 ರ ಆದೇಶ ಸಂಖ್ಯೆ: ಸಿಆಸುಇ 017 ಕೆಇವಿ 09 ರಲ್ಲಿ ಅಭಿಯೋಜನೆಗೆ ಒಳಪಡಿಸಲು ಸರ್ಕಾರದ ಅನುಮೋದನೆ ನೀಡಲಾಗಿದ್ದು, ಈ ಆದೇಶದ ಪ್ರಸ್ತಾವನೆಯ ಭಾಗದ ಕಂಡಿಕೆ 7 ರ ಎರಡನೇ ಸಾಲಿನಲ್ಲಿ ನಮೂದಿಸಿರುವ ಕಲಂ 19(ಸಿ) ಎಂಬುದರ ಬದಲಾಗಿ, ಕಲಂ 19(1)(ಬಿ) ಎಂದು ನಮೂದಿಸಿ ಪರಿಷ್ಕರಿಸಿದ ಅಭಿಯೋಜನಾ ಮಂಜೂರಾತಿ ಆದೇಶ ಹೊರಡಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಪತ್ರದಲ್ಲಿ ಕೋರಲಾಗಿದ್ದು, ಅದರಂತೆ ಕಲಂ 19(1)(ಬಿ) ಎಂದು ಪರಿಷ್ಕರಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 017 ಕೆಇವಿ 09 ಬೆಂಗಳೂರು, ದಿನಾಂಕ 25-11-2011**

ಆರೋಪಿಯಾದ ಶ್ರೀ ಎ. ಮರೀಗೌಡ, ಕೆಎಎಸ್ (ಕಿರಿಯ ಶ್ರೇಣಿ), ಹಿಂದಿನ ಉಪ ನಿರ್ದೇಶಕರು, ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ, ರಾಮನಗರ ಜಿಲ್ಲೆ, ರಾಮನಗರ ಇವರನ್ನು ಹುದ್ದೆಯಿಂದ ತೆಗೆದು ಹಾಕುವ (ವಜಾ ಮಾಡುವ) ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಕರ್ನಾಟಕ ಸರ್ಕಾರವು ಶ್ರೀ ಎ. ಮರೀಗೌಡ, ಕೆಎಎಸ್ (ಕಿರಿಯ ಶ್ರೇಣಿ), ಹಿಂದಿನ ಉಪ ನಿರ್ದೇಶಕರು, ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ, ರಾಮನಗರ ಜಿಲ್ಲೆ, ರಾಮನಗರ ಇವರನ್ನು ಲಂಚ ನಿರೋಧಕ ಕಾಯ್ದೆ 1988 ರ ಕಲಂ 7, 13(1)(d) ಜೊತೆಯಲ್ಲಿ ಓದಲಾದ 13(2) ರ ಪ್ರಕಾರ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಜನೆಗೆ ಒಳಪಡಿಸಲು ಈ ಮೂಲಕ ಮಂಜೂರಾತಿಯನ್ನು ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ, 1977 ರ ಪ್ರಕಾರ ಈ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿ ಅಡಿಯಲ್ಲಿ ದಿನಾಂಕ: 21-09-11 ರಂದು ಹೊರಡಿಸಿದೆ.

ದಿನಾಂಕ: 21-09-11ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 017 ಕೆಇವಿ 09 ಅನ್ನು ಹಿಂಪಡೆದಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಪಿ. ಮೋಹನ್‌ರಾಜ್**

ಸರ್ಕಾರದ ಉಪ ಕಾರ್ಯದರ್ಶಿ

ಸಿಆಸುಇ (ಸೇವೆಗಳು)

ಪಿ.ಆರ್. 2743

## INFRASTRUCTURE DEVELOPMENT SECRETARIAT

Sub: Surrender of Funds allocated during 2011-12 for High Speed Rail Link Project-reg.

Read: O.M. No. K-14011/25/2008-Metro, received form the Ministry of Urban Development (Metro Rail Cell), Government of India, New Delhi.

**PREAMBLE:**

In the Office Memorandum read above, Government of India has communicated that the HSRL project would be taken up as a Central Sector Project. In view of the above, it was discussed in the meeting chaired by the Chief Secretary, Government of Karnataka in the presence of Additional Chief Secretary, Urban Development Department, Principal Secretary to Govt., Finance Department, Managing Director, BMRCL and Secretary to Govt., Infrastructure Development Department for taking forward the HSRL project as a Central Sector Project from its current stage.

2. The decision was communicated to the Secretary to Govt. Ministry of Urban Development, Government of India vide letter dated 26.09.2011 agreeing to take up the HSRL Project as a Central Sector Project through BMRCL All the files and documents pertaining to the HSRL project were transferred to BMRCL on 12th October 2011 as decided in the Board of BMRCL.

3. Since this project has been transferred to BMRCL, the funds allocated for this project in IDD has to be transferred to Urban Development Department (Administrative Department for BMRCL) for further release to BMRCL towards acquisition of land for the project.

4. The Finance Department was requested to withdraw the said amount and to reallocate the same to UDD for onward release to BMRCL or that the amount may be drawn by the Director (Projects), BARL and handed over to MD, BMRCL

5. Finace Department has suggested to surrender Rs. 7570.00 lakhs provided during 2011-12 under the Budget head of Account "5465-01-190-3-06 (plan)-211-Investment for HSRL project.

6. Hence this Order.

**Government Order No. IDD 125 DIA 2010, Bangalore, Dated: 26-11-2011**

Under the circumstances explained in the preamble, Budget allocation of Rs. 7570.00 lakhs provided under the Head of Account 5465-01-190-3-06-211 Investments - Rail Link to New Airport - for the financial year 2011-12 to Infrastructure Development Department is herewith surrendered to Finance Department for reallocating the funds along with the Head of Account to Urban Development Department.

2. This order issues with the concurrence of vide FD No. 1650 Exp-1/11 dated 19-11-2011.

By Order and in the name of the Governor of Karnataka

**S.J. SAMPATH KUMAR**

Under Secretary to Government

Infrastructure Development Department.

PR No. 2744

## ಇಂಧನ ಸಚಿವಾಲಯ

**ವಿಷಯ :** ಮೆ॥ ಬಿ.ವಿ.ಹೆಚ್. ಹೈಡಲ್ ಪ್ರೈವೇಟ್ ಲಿಮಿಟೆಡ್ ಇವರಿಗೆ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಮಾರ್ಕಂಡೆಯ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :** 1)ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕ್ರೆಡಲ್/06/SH-772/Visvesvaraya MHS/563 ದಿನಾಂಕ 03/11.02.2001 ಮತ್ತು ಕ್ರೆಡಲ್/06/ SH-771/Visvesvaraya SHP/2011/1499 ದಿನಾಂಕ 23/26.05.2011

2) ದಿನಾಂಕ: 27.05.2011ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಬಿ.ವಿ.ಹೆಚ್. ಹೈಡಲ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಬೆಳಗಾವಿ ಜಿಲ್ಲೆ, ಹುಕ್ಕೇರಿ ತಾಲ್ಲೂಕು, ಶಿರೂರು ಗ್ರಾಮ ಪ್ರದೇಶದಲ್ಲಿ ಮಾರ್ಕಂಡೇಯ ಅಣೆಕಟ್ಟಿನ ಹತ್ತಿರ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಮಾರ್ಕಂಡೇಯ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ॥ ಬಿ.ವಿ.ಹೆಚ್. ಹೈಡಲ್ ಪ್ರೈವೇಟ್ ಲಿಮಿಟೆಡ್ ಇವರಿಗೆ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಮಾರ್ಕಂಡೇಯ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 39 ಎನ್‌ಸಿಇ 2011, ಬೆಂಗಳೂರು, ದಿನಾಂಕ : 17–11–2011.**

ಮೆ॥ ಬಿ.ವಿ.ಹೆಚ್. ಹೈಡಲ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಬೆಳಗಾವಿ ಜಿಲ್ಲೆ, ಹುಕ್ಕೇರಿ ತಾಲ್ಲೂಕು, ಶಿರೂರು ಗ್ರಾಮ ಪ್ರದೇಶದಲ್ಲಿ ಮಾರ್ಕಂಡೇಯ ಅಣೆಕಟ್ಟಿನ ಹತ್ತಿರ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಮಾರ್ಕಂಡೇಯ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಕಂಡ ಶೆಡ್ಯೂಲ್ ಹಾಗೂ ಷರತ್ತಿಗೊಳಪಟ್ಟು ಹಂಚಿಕೆ ಮಾಡಲಾಗಿದೆ.

| Company | MHS | Locatin | MW | Weir Lattitude | Weir Longitude | Power House Lattitude | Power House Longitude | FRL (M) | TW L (M) | Design Head | Design Discharge (Cumees) |
|---|---|---|---|---|---|---|---|---|---|---|---|
| M/s. ¨BVH Hydel Pvt. Ltd. | Markandeya | Shiruru village Hukkeri Taluk, Belgaum District | 0.50 | 16°00' 12.86'' | 74°38' 51.86'' | 16°01' 07.44'' | 74°38'' 39.62 | 702. | 695 | 7 | 6 |

(ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

1(ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು, ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು, ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು (ಒಡಂಬಡಿಕೆಯನ್ನು ಕಡ್ಡಾಯವಾಗಿ ಕನ್ನಡದಲ್ಲಿಯೇ ಸಲ್ಲಿಸತಕ್ಕದ್ದು)

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

(ಈ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಮುಂತಾದ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

2(ಅ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಅವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

(ಆ) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಷಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು

3. ಯೋಜನೆಯನ್ನು ಆದೇಶ ದಿನಾಂಕದಿಂದ 3 ವರ್ಷದ (ಮೂರು ವರ್ಷ) ಅವಧಿಯೊಳಗೆ ಅನುಷ್ಠಾನಗೊಳಿಸತಕ್ಕದ್ದು.

4. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

5. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

6. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್/ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

7. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

8. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

9. ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

10. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

11. ಸದರಿ ಯೋಜನೆಯನ್ನು ಅಭಿವೃದ್ಧಿದಾರರು ಕಾರ್ಯಗತ (implement) ಮಾಡದ ಹೊರತು, ವರ್ಗಾವಣೆ/ಮಾರಾಟಕ್ಕೆ ಅನುಮೋದನೆ ನೀಡಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 2745

## ಇಂಧನ ಸಚಿವಾಲಯ

**ವಿಷಯ :** ಮೆ॥ ಚಂದನ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಟಗ್ನೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕ್ರೆಡಲ್/06/SH-792/Kataknur MHS/1001 ದಿನಾಂಕ: 22/28.03.2011 ಮತ್ತು ಕ್ರೆಡಲ್/06/ SH-792/ Kataknur-MHS/1478 ದಿನಾಂಕ 19/23.05.2011.

2.ದಿನಾಂಕ: 27.05.2011ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಚಂದನ ಎನರ್ಜಿ (ಪ್ರೈವೇಟ್) ಲಿಮಿಟೆಡ್ ಇವರಿಗೆ ರಾಯಚೂರು ಜಿಲ್ಲೆಯ ಮಾನ್ವಿ ತಾಲ್ಲೂಕು, ಕಟಗ್ನೂರ್ ಗ್ರಾಮದ ಹತ್ತಿರ

ತುಂಗಾ ಭದ್ರಾ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಟಗ್ನೂರ್ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ॥ ಚಂದನ ಎನರ್ಜಿ (ಪ್ರೈವೇಟ್) ಲಿಮಿಟೆಡ್ ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 195 ಎನ್‌ಸಿಇ 2011, ಬೆಂಗಳೂರು, ದಿನಾಂಕ : 17–11–2011.**

ಮೆ॥ ಚಂದನ ಎನರ್ಜಿ (ಪ್ರೈವೇಟ್) ಲಿಮಿಟೆಡ್ ಇವರಿಗೆ ರಾಯಚೂರು ಜಿಲ್ಲೆಯ ಮಾನ್ವಿ ತಾಲ್ಲೂಕು, ಕಟಗ್ನೂರ್ ಗ್ರಾಮದ ಪ್ರದೇಶದಲ್ಲಿ ತುಂಗಾ ಭದ್ರಾ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಟಗ್ನೂರ್ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಕಂಡ ಶೆಡ್ಯೂಲ್ ಹಾಗೂ ಷರತ್ತಿಗೊಳಪಟ್ಟು ಹಂಚಿಕೆ ಮಾಡಲಾಗಿದೆ.

| Company | MHS | Locatin | MW | Weir Latitude | Weir Longitude | Power House Latitude | Power House Longitude | FRL (M) | TWL (M) | Design Head | Design Discharge (Cumecs) |
|---|---|---|---|---|---|---|---|---|---|---|---|
| M/s. Chandan aEnergy (P) Ltd. | Kata knur | Kataknur village, Manvi Taluk, Raichur District | 2.00 | 15°57' 53'' | 77°14' 43'' | 15°57' 50'' | 77°16' 26'' | 328 | 318 | 8 | 25 |

(ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

1(ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು, ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು, ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು (ಒಡಂಬಡಿಕೆಯನ್ನು ಕಡ್ಡಾಯವಾಗಿ ಕನ್ನಡದಲ್ಲಿಯೇ ಸಲ್ಲಿಸತಕ್ಕದ್ದು)

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

(ಈ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಮುಂತಾದ ಇಲಾಖೆಗಳಿಂದ ಕ್ಲಿಯರೆನ್ಸ್ ಪಡೆಯತಕ್ಕದ್ದು ಸಲ್ಲಿಸತಕ್ಕದ್ದು, ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

2 ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಅವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಯೋಜನೆಯನ್ನು ಆದೇಶ ಹೊರಡಿಸಿದ ದಿನಾಂಕದಿಂದ 3 ವರ್ಷದ (ಮೂರು ವರ್ಷ) ಅವಧಿಯೊಳಗೆ ಅನುಷ್ಠಾನಗೊಳಿಸತಕ್ಕದ್ದು.

4. ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

5. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

6. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್/ನೀರಾವರಿ/ ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

7. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಅಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

8. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

9. ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

10. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

11. ಸದರಿ ಯೋಜನಾ ಸ್ಥಳವು ಕರ್ನಾಟಕ ಹಾಗೂ ಆಂಧ್ರಪ್ರದೇಶ ರಾಜ್ಯಗಳ ಗಡಿಪ್ರದೇಶದಲ್ಲಿ ಬರುವುದರಿಂದ ತುಂಗಭದ್ರ ಮಂಡಳಿಯ ತೀರುವಳಿಯನ್ನು (clearance) ಪಡೆಯತಕ್ಕದ್ದು.

12 ಸದರಿ ಯೋಜನೆಯನ್ನು ಅಭಿವೃದ್ಧಿದಾರರು ಕಾರ್ಯಗತ (implement) ಮಾಡದಹೊರತು, ವರ್ಗಾವಣೆ/ಮಾರಾಟಕ್ಕೆ ಅನುಮೋದನೆ ನೀಡಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2746 ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ॥ ಇನೋವರ್ಸ್ ಈಕೊ ಫ್ರೆಂಡ್ಲಿ ಸಲ್ಯೂಷನ್ಸ್ ಇವರಿಗೆ 0.40 ಮೆಗಾ ವ್ಯಾಟ್ ಸಾಮರ್ಥ್ಯದ ತಿಮ್ಮನ ಹೊಸೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕ್ರೆಡಲ್/06/SH-755/Hebekawadi Branch Canal MHS/307 ದಿನಾಂಕ: 05/24.01.2011 ಮತ್ತು ಕ್ರೆಡಲ್/06/SH-755/Hebekawadi Branch Canal/2011/1431 ದಿನಾಂಕ 18/20.05.2011.

2. ದಿನಾಂಕ: 27.05.2011ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಇನೋವರ್ಸ್ ಈಕೊ ಫ್ರೆಂಡ್ಲಿ ಸಲ್ಯೂಷನ್ಸ್ ಇವರಿಗೆ ಮಂಡ್ಯ ಜಿಲ್ಲೆ, ಮಂಡ್ಯ ತಾಲ್ಲೂಕು, ಕೊತ್ತತ್ತಿ ಹೋಬಳಿ, ತಿಮ್ಮನ ಹೊಸೂರು ಗ್ರಾಮ ಪ್ರದೇಶದಲ್ಲಿ ವಿ.ಸಿ.ಹೆಬೆಕವಾಡಿ ನದಿಗೆ ಅಡ್ಡಲಾಗಿ 0.40 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ॥ ಇನೋವರ್ಸ್ ಈಕೊ ಫ್ರೆಂಡ್ಲಿ ಸಲ್ಯೂಷನ್ಸ್ ಇವರಿಗೆ 0.4 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 45 ಎನ್‌ಸಿಇ 2011, ಬೆಂಗಳೂರು, ದಿನಾಂಕ : 10-11-2011.**

ಮೆ॥ ಇನೋವರ್ಸ್ ಈಕೊ ಫ್ರೆಂಡ್ಲಿ ಸಲ್ಯೂಷನ್ಸ್ ಇವರಿಗೆ ಮಂಡ್ಯ ಜಿಲ್ಲೆಯ ಕೊತ್ತತ್ತಿ ಹೋಬಳಿ, ತಿಮ್ಮನ ಹೊಸೂರು ಗ್ರಾಮ ಪ್ರದೇಶದಲ್ಲಿ 0.40 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಕಂಡ ಶೆಡ್ಯೂಲ್ ಹಾಗೂ ಷರತ್ತಿಗೊಳಪಟ್ಟು ಹಂಚಿಕೆ ಮಾಡಲಾಗಿದೆ.

| Company | MHS | Locatin | MW | Weir Lattitude | Weir Longitude | Power House Lattitude | Power House Longitude | FRL (M) | TWL (M) | Design Head | Design Discharge (Cumees) |
|---|---|---|---|---|---|---|---|---|---|---|---|
| M/s. Innoverse Eco Friendly Solutions | Yeliyur | Near Tibbanahalli Jayapura Cross, Mandya Taluk & District | 0.40 | 12°27' 48'' | 76°56' 49'' | 12°26' 58'' | 76°55' 57'' | 624 | 619 | 5 | 10 |

(ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

1(ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು, ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು, ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು (ಒಡಂಬಡಿಕೆಯನ್ನು ಕಡ್ಡಾಯವಾಗಿ ಕನ್ನಡದಲ್ಲಿಯೇ ಸಲ್ಲಿಸತಕ್ಕದ್ದು)

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

(ಈ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಮುಂತಾದ ಇಲಾಖೆಗಳಿಂದ ಕ್ಲಿಯರೆನ್ಸ್ ಪಡೆಯತಕ್ಕದ್ದು ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

2 ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಯೋಜನೆಯನ್ನು ಆದೇಶ ಹೊರಡಿಸಿದ ದಿನಾಂಕದಿಂದ 3 ವರ್ಷದ (ಮೂರು ವರ್ಷ) ಅವಧಿಯೊಳಗೆ ಅನುಷ್ಠಾನಗೊಳಿಸತಕ್ಕದ್ದು.

4. ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

5. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

6. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್/ನೀರಾವರಿ/ ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

7. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಅಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

8. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

9. ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

10. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

11. ಸದರಿ ಯೋಜನೆಯನ್ನು ಅಭಿವೃದ್ಧಿದಾರರು ಕಾರ್ಯಗತ (implement) ಮಾಡದಹೊರತು, ವರ್ಗಾವಣೆ/ಮಾರಾಟಕ್ಕೆ ಅನುಮೋದನೆ ನೀಡಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

ಪಿ.ಆರ್. 2747

## ಕಂದಾಯ ಸಚಿವಾಲಯ

**ವಿಷಯ :** ಉಡುಪಿ ಜಿಲ್ಲೆ, ಕಾರ್ಕಳ ತಾಲ್ಲೂಕು, ದುರ್ಗಾ ಗ್ರಾಮದ ಕಿರು ವಿದ್ಯುತ್ ಯೋಜನೆಗೆ ಮೆ॥ ಜಿ.ವಿ.ಪಿ. ಇನ್ಫ್ರಾಪ್ರಾಜೆಕ್ಟ್ ಪ್ರೈ ಲಿ. ಕಂಪನಿಗೆ 10 ಮೆಗಾ ವ್ಯಾಟ್ ಸಾಮರ್ಥ್ಯದ ವಿದ್ಯುತ್ ತೆಗೆಯಲು ಮಿಯಾರು ಗ್ರಾಮದ ಸ.ನಂ. 489/ಪಿ2 ರಲ್ಲಿ 11–00 ಎಕರೆ ಜಮೀನನ್ನು ಗೇಣಿಯಲ್ಲಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1) ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ರವರ ಪತ್ರ ಸಂಖ್ಯೆ: ಎಲ್‌ಎನ್‌ಡಿ/ಎನ್.ಸಿಆರ್.55–10–11 ದಿನಾಂಕ 28–07–2010.
2) ಸರ್ಕಾರದ ಸುತ್ತೋಲೆ ಸಂಖ್ಯೆ: ಆರ್‌ಡಿ78 ಎಲ್‌ಜಿಪಿ 2009 ದಿ: 04.01.2011
3) ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕುಂದಾಪುರ ವಿಭಾಗ, ಕುಂದಾಪುರ ಇವರ ಪತ್ರ ಸಂಖ್ಯೆ: ಡಿಎಂಎನ್:ವಿವ 20/09–10 ದಿನಾಂಕ: ದಿ: 29.07.2009.
4) ಕಾರ್ಯ ನಿರ್ವಾಹಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಮಂಗಳೂರುರವರ ಪತ್ರ ಸಂಖ್ಯೆ: ಕಾಸಮಂ / ತಾ.ಶಾ / ಸಇ / ದುರ್ಗಾಹೊಳೆ / ಜಿವಿಪಿಇನ್ಫ್ರಾಪ್ರಾಜೆಕ್ಟ್ / 2010–11/1840 ದಿನಾಂಕ: 26.8.2010.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ರವರ ದಿ: 28.07.2010ರ ಪತ್ರದಲ್ಲಿ ಉಡುಪಿ ಜಿಲ್ಲೆ, ಕಾರ್ಕಳ ತಾಲ್ಲೂಕು, ದುರ್ಗಾ ಗ್ರಾಮದ ಕಿರು ವಿದ್ಯುತ್ ಯೋಜನೆಗೆ ಮೆ॥ ಜಿ.ವಿ.ಪಿ. ಇನ್ಫ್ರಾಪ್ರಾಜೆಕ್ಟ್ ಪ್ರೈ.ಲಿ. ಕಂಪನಿಗೆ 10 ಮೆಗಾ ವ್ಯಾಟ್ ಸಾಮರ್ಥ್ಯದ ವಿದ್ಯುತ್ ತೆಗೆಯಲು ಮಿಯಾರು ಗ್ರಾಮದ ಸ.ನಂ. 489/ಪಿ2 ರಲ್ಲಿ 11–00 ಎಕರೆ ಜಮೀನನ್ನು ಗೇಣಿಯಲ್ಲಿ ಮಂಜೂರು ಮಾಡುವ ಬಗ್ಗೆ ಸರ್ಕಾರದ ಅನುಮತಿ ನೀಡುವಂತೆ ಕೋರಿರುತ್ತಾರೆ.

2) ಸದರಿ ಪ್ರಸ್ತಾವನೆಯಲ್ಲಿ ಪ್ರಸ್ತಾಪಿತ ಜಮೀನು ಆರ್.ಟಿ.ಸಿ. ದಾಖಲೆಯಂತೆ ಒಟ್ಟು 27 ಎಕರೆ 45 ಸೆಂಟ್ಸ್ ವಿಸ್ತೀರ್ಣ ಇದ್ದು, ಸರ್ಕಾರ ಎಂದು ದಾಖಲಾಗಿದೆ ಮತ್ತು ಆಕಾರ್‌ಬಂದ್‌ನಂತೆ ಒಟ್ಟು 27 ಎಕರೆ 63 ಸೆಂಟ್ಸ್ ಜಮೀನಿದ್ದು ಖುಷ್ಕಿ ಎಂದು ದಾಖಲಾಗಿದೆ. ಕಾರ್ಕಳ ತಹಶೀಲ್ದಾರರು ದಿ: 02.06.2008ರಂದು ಸ್ಥಳ ತನಿಖೆ ನಡೆಸಿ, ಈ ಕೆಳಕಂಡ ಷರತ್ತು ವಿಧಿಸಿ, ಗೇಣಿಗೆ ನೀಡಬಹುದೆಂದು ಅಭಿಪ್ರಾಯ ಪಟ್ಟಿರುತ್ತಾರೆ.

3) ಬ್ರಹ್ಮಾಸ್ಥಾನಕ್ಕೆ ಹೊಂದಿಕೊಂಡಿರುವ ದಾಟುಸೇತುವೆ ಎತ್ತರಕ್ಕಿಂತ ಕನಿಷ್ಠ 1 1/2 ಮೀಟರ್ ಕಡಿಮೆ ಮಾಡಿ ಘಟಕ ಸ್ಥಾಪಿಸುವುದು. ಸದರಿ ಭೂಮಿಯಲ್ಲಿರುವ ಪ್ರಾಕೃತಿಕ ಸ್ಥಿತಿಗೆ ಯಾವುದೇ ರೀತಿಯ ಧಕ್ಕೆ ಮಾಡತಕ್ಕದಲ್ಲ. ಈ ವಿದ್ಯುತ್ ಘಟಕ ಸ್ಥಾಪನೆಗೆ ಮೊದಲು ಅಗತ್ಯವುಳ್ಳ ಇಲಾಖೆಗಳಿಂದ ಅನುಮತಿ ಪಡೆಯುವುದು. ಈ ಜಲ ವಿದ್ಯುತ್ ಯೋಜನೆಯಿಂದ ಪರಿಸರದ ನಾಗರಿಕರಿಗೆ ಮತ್ತು ಕೃಷಿಕರಿಗೆ ಯಾವುದೇ ನಷ್ಟ ಉಂಟಾಗದಂತೆ ನೋಡಿಕೊಳ್ಳಬೇಕು. ಈ ಯೋಜನೆಯಿಂದ ಪರಿಸರ ಮಾಲಿನ್ಯಕ್ಕೆ ಅಡ್ಡಿಯಾಗದಂತೆ ನೋಡಿಕೊಳ್ಳಬೇಕೆಂಬ ಷರತ್ತಿನಿಂದ ನಿರಾಕ್ಷೇಪಣೆ ನೀಡಲಾಗಿದೆ.

4) ಮೇಲೆ (3)ರಲ್ಲಿ ಓದಲಾದ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕುಂದಾಪುರ ಉಪ ವಿಭಾಗ, ಕುಂದಾಪುರ ರವರು ದಿ: 29.07.2009ರ ಪತ್ರದಲ್ಲಿ ಈ ಜಮೀನಿನ ಲಗತ್ತು ಸುರಕ್ಷಿತ ಅರಣ್ಯ ಮತ್ತು ಕೇಂದ್ರ ಪರಿಣಿತ ಸಮಿತಿಗೆ ಸಲ್ಲಿಸಿರುವ ಜಮೀನುಗಳ ಪಟ್ಟಿಯಲ್ಲಿ ಸೇರ್ಪಡೆಯಾಗಿರುವ ಜಿಲ್ಲಾ ಅರಣ್ಯ ಆಗಿರುವುದಿಲ್ಲವೆಂದು, ಈ ಪ್ರದೇಶದಲ್ಲಿ ಕರಿಮರ ಜಾತಿಯ ಮರಗಳಿರುತ್ತದೆಯೆಂದು, ಇಲಾಖೆ ಅನುಮತಿ ಇಲ್ಲದೇ, ದಡದಲ್ಲಿರುವ ಮರಗಳನ್ನು ಕಡಿಯುವುದಿಲ್ಲವೆಂದು ಸಂಸ್ಥೆಯವರು ಪತ್ರದಲ್ಲಿ ಬರೆದುಕೊಟ್ಟಿರುವುದರಿಂದ ಅರಣ್ಯ ನಿಯಮ 41(1) 41(2) ರಂತೆ ವಲಯ ಅರಣ್ಯ ಅಧಿಕಾರಿಯವರ ಆಕ್ಷೇಪವೆಂದು, ಅದು ಸಮರ್ಥನೀಯವೆಂದು ಕಂಡು ಬರುವುದಿಲ್ಲವೆಂದು, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಮೂಡಬಿದ್ರೆ ರವರು ವರದಿ ಸಲ್ಲಿಸಿದ್ದು, ಸದರಿ ಸಂಸ್ಥೆಗೆ ಯಾವುದೇ ಮರಗಳನ್ನು ಕಡಿಸಿ ತೆಗೆಯದಂತೆ ನಿಬಂಧನೆ ಮಾಡಿ ಸಂಸ್ಥೆಯ ಕೆಲಸದಿಂದ ದಂಡೆಗೆ ಹಾನಿಯಾಗದಂತೆ, ಪರಿಸರಕ್ಕೆ ಹಾನಿಯಾಗದಂತೆ ಎಚ್ಚರಿಕೆ ವಹಿಸಲು ಗೇಣಿ ಮಂಜೂರು ಮಾಡಬಹುದೆಂದು ಹಾಗೂ ಅರಣ್ಯ ಇಲಾಖೆ ಅನುಮತಿ ಇಲ್ಲದೇ ಷರತ್ತುಗಳು ಉಲ್ಲಂಘನೆ ಆದರೆ ಅರಣ್ಯ ಇಲಾಖೆ ಕಾನೂನು ಕ್ರಮ ತೆಗೆದುಕೊಳ್ಳಬಹುದೆಂದು ಹೊಣೆಗಾರಿಕೆ ಪತ್ರ ಪಡೆದು, ಸದರಿ ಸಂಸ್ಥೆಗೆ ಜಮೀನು ಮಂಜೂರು ಮಾಡಬಹುದೆಂದು ಅಭಿಪ್ರಾಯ ನೀಡಿರುತ್ತಾರೆ.

5) ಮೇಲೆ (4)ರಲ್ಲಿ ಓದಲಾದ ಕಾರ್ಯ ನಿರ್ವಾಹಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಮಂಗಳೂರು ರವರ ಪತ್ರ ಸಂಖ್ಯೆ:ಕಾಸಮಂ/ತಾ.ಶಾ/ಸಇ/ದುರ್ಗಾಹೊಳೆ/ಜಿವಿಪಿ ಇನ್ಫ್ರಾಪ್ರಾಜೆಕ್ಟ್/2010–11/1840 ದಿನಾಂಕ: 26.8.10 ರಲ್ಲಿ ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)ಯು ಮೆ॥ ಜಿ.ವಿ.ಪಿ. ಇನ್ಫ್ರಾಪ್ರಾಜೆಕ್ಟ್ ಪ್ರೈ.ಲಿ. ಬೆಂಗಳೂರು ಇವರೊಂದಿಗೆ ದಿನಾಂಕ: 24.08.2010ರಂದು ಮಾಡಿಕೊಂಡಿರುವ ಕರಾರಿನಲ್ಲಿನ ಷರತ್ತುಗಳ ಮೇರೆಗೆ ಜಲಸಂಪನ್ಮೂಲ ಇಲಾಖೆಯು ಅನುಮೋದನೆ ನೀಡಿರುತ್ತದೆ. ಸಂಸ್ಥೆಯವರು ಕಾಮಗಾರಿಯನ್ನು ಪ್ರಾರಂಭಿಸುವ ಮುನ್ನ ಕರಾರಿನಲ್ಲಿ ತಿಳಿಸಿರುವಂತೆ ಜಲಸಂಪನ್ಮೂಲ ಇಲಾಖೆಯ ಸಂಬಂಧಪಟ್ಟ ಕಾರ್ಯಪಾಲಕ ಅಭಿಯಂತರ ಅನುಮೋದನೆ ಪಡೆಯುವಂತೆ ನಿರ್ದೇಶಕರು, ಮೆ॥ ಜಿ.ವಿ.ಪಿ. ಇನ್ಫ್ರಾಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು ರವರಿಗೆ ತಿಳಿಸಿರುತ್ತಾರೆ.

6) ಜಿಲ್ಲಾಧಿಕಾರಿಗಳು, ಮಿಯಾರು ಗ್ರಾಮದಲ್ಲಿ ಸರಿಸಮಾನ ಜಮೀನುಗಳ ಎಕರೆ ಒಂದಕ್ಕೆ ಮಾರಾಟ ದರ ರೂ. 1,40,000–00 ಇದ್ದು, ಅದರಂತೆ 11–00 ಎಕರೆಗೆ ರೂ. 15,40,000–00 ಭೂ ಮೌಲ್ಯ ಆಗುವುದಾಗಿ ತಿಳಿಸಿರುತ್ತಾರೆ. ಗೇಣಿ ಜಮೀನಿಗೆ ಗೇಣಿ ಮೌಲ್ಯ ನಿರ್ಧರಿಸುವಾಗ ಮಾರ್ಕೆಟ್ ಧಾರಣೆಯ 20ನೇ ಒಂದಂಶವನ್ನು ಗಣನೆಗೆ ತೆಗೆದುಕೊಂಡು, ಸದರಿ ಜಮೀನಿಗೆ ರೂ. 77,000–00ಗಳ ವಾರ್ಷಿಕ ಗೇಣಿ ನಿಗದಿಪಡಿಸಿ, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ ನಿಯಮ 19(2)ಡಿ ರಂತೆ ಸಂಸ್ಥೆಗೆ 30 ವರ್ಷಗಳ ಅವಧಿಗೆ ಗೇಣಿ ನೆಲೆಯಲ್ಲಿ ಅರಣ್ಯ ಇಲಾಖೆಯ ಷರತ್ತಿಗೊಳಪಟ್ಟು ಮಂಜೂರು ಮಾಡಬಹುದಾಗಿ ಶಿಫಾರಸ್ಸು ಮಾಡಿರುತ್ತಾರೆ. ಮೆ॥ ಜಿವಿಪಿ ಇನ್ಫ್ರಾಪ್ರಾಜೆಕ್ಟ್ ಪ್ರೈ.ಲಿ. ಕಂಪನಿಯವರು ಸಂಬಂಧಪಟ್ಟ ದಾಖಲೆಗಳು ಜೆರಾಕ್ಸ್ ಪ್ರತಿಗಳನ್ನು ದೃಢೀಕರಿಸಿ ಒದಗಿಸಿರುತ್ತಾರೆ ಹಾಗೂ 5 ವರ್ಷಗಳ ಆಡಿಟ್ ವರದಿಯನ್ನು ಒದಗಿಸಿರುತ್ತಾರೆ.

7) ಮೇಲೆ ಓದಲಾದ (2)ರ ಕಂದಾಯ ಇಲಾಖೆ ಸುತ್ತೋಲೆಯಲ್ಲಿ ದಿ: 03.11.2011ರಂದು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ನಡೆದ ಸಭೆಯಲ್ಲಿ ಇಂಧನ ಇಲಾಖೆಯ ಕೋರಿಕೆಯಂತೆ ಇನ್ನು ಮುಂದೆ ಸರ್ಕಾರಿ ಜಮೀನುಗಳನ್ನು ಗುತ್ತಿಗೆ ಆಧಾರದ ಮೇಲೆ ಕರ್ನಾಟಕ ನವೀಕರಿಸಬಹುದಾದ ಇಂಧನ ನಿಯಮಿತ ಇವರಿಗೆ ಮಂಜೂರು ಮಾಡುವ ಬದಲಾಗಿ ಯೋಜನೆ ಕೈಗೊಳ್ಳುವ ಸಂಸ್ಥೆಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲು ನಿರ್ಣಯಿಸಲಾಗಿರುತ್ತದೆ.

8) ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರುರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶ ಹೊರಡಿಸಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 169 ಎಲ್‌ಜಿಎ 2011, ಬೆಂಗಳೂರು, ದಿನಾಂಕ 17–11–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಉಡುಪಿ ಜಿಲ್ಲೆ, ಕಾರ್ಕಳ ತಾಲ್ಲೂಕು, ದುರ್ಗಾ ಗ್ರಾಮದ ಕಿರು ವಿದ್ಯುತ್ ಯೋಜನೆಗೆ, ಮಿಯಾರು ಗ್ರಾಮದ ಸ.ನಂ. 489/ಪಿ2 ರಲ್ಲಿ 11–00 ಎಕರೆ ಜಮೀನನ್ನು ಗುತ್ತಿಗೆ ಆಧಾರದ ಮೇಲೆ ಪ್ರಚಲಿತ ಮಾರುಕಟ್ಟೆ ದರ ಆಧರಿಸಿ, ವಾರ್ಷಿಕ ಗುತ್ತಿಗೆ ದರ ನಿಗದಿಪಡಿಸಿ, ಪ್ರತಿ 2 ವರ್ಷಗಳಿಗೊಮ್ಮೆ ಶೇ. 10 ರಷ್ಟು ಗುತ್ತಿಗೆ ಹೆಚ್ಚಿಸುವ ಹಾಗೂ ಮೇಲಿನ ನೀರಾವರಿ ಇಲಾಖೆ ಮತ್ತು ಅರಣ್ಯ ಇಲಾಖೆಗಳು ವಿಧಿಸಿರುವ ಷರತ್ತುಗಳಿಗೆ ಒಳಪಟ್ಟು ಮೆ॥ ಜಿ.ವಿ.ಪಿ. ಇನ್ಫ್ರಾಪ್ರಾಜೆಕ್ಟ್ ಪ್ರೈ.ಲಿ. ಕಂಪನಿಗೆ 10 ಮೆಗಾ ವ್ಯಾಟ್ ಸಾಮರ್ಥ್ಯದ ವಿದ್ಯುತ್ ಉತ್ಪಾದಿಸಲು, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು 1969ರ ನಿಯಮ 19 (2) ರನ್ವಯ ಸದರಿ ಸಂಸ್ಥೆಗೆ 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆ.ಇ. 848 ವೆಚ್ಚ–7/2011 ದಿ: 26.09.2011ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೀತಾ ರಮೇಶ್**

ಸರ್ಕಾರದ ಜಂಟಿ ಕಾರ್ಯದರ್ಶಿ

(ಭೂಮಂ, ಭೂಕಂ, ಮತ್ತು ಸೇವೆಗಳು)

ಕಂದಾಯ ಇಲಾಖೆ

ಪಿ.ಆರ್. 2748

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** 2011–12ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯ ರಾಜ್ಯದ ಪಾಲಿನ ಒಂದನೇ ಕಂತಿನ ಅನುದಾನವನ್ನು ಚಿಕ್ಕಮಗಳೂರು ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಆರ್–18014/01/:2011–12 ಡಿಆರ್‌ಡಿಎ (ಎಸ್‌ಎಲ್ ನಂ.10) ದಿನಾಂಕ 15–04–2011.
2) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 6 ಎಸ್‌ಜೆವೈ (ಡಿಆರ್‌ಡಿಎ) 2010, ಬೆಂಗಳೂರು, ದಿನಾಂಕ: 03–05–2011.
3) ಗ್ರಾಅಪ 2 ಎಸ್‌ಜೆವೈ (ಡಿಆರ್‌ಡಿಎ) 2011, ಬೆಂಗಳೂರು, ದಿನಾಂಕ: 20.08.2011.
4) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಆರ್–17014/10/:2011–12 ಡಿಆರ್‌ಡಿಎ (ಎಸ್‌ಎಲ್ ನಂ. 34) ದಿನಾಂಕ: 12.07.2011.

**ಪ್ರಸ್ತಾವನೆ :**

ಡಿಆರ್‌ಡಿಎ ಆಡಳಿತ ಯೋಜನೆಯು ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು 75:25ರ ಅನುಪಾತದಲ್ಲಿ ಭರಿಸುತ್ತದೆ. 2011–12 ನೇ ಸಾಲಿಗೆ ಕೇಂದ್ರ ಸರ್ಕಾರ ರಾಜ್ಯದ ಚಿಕ್ಕಮಗಳೂರು ಮತ್ತು ಯಾದಗಿರಿ ಜಿಲ್ಲಾ ಪಂಚಾಯತ್ ಹೊರತುಪಡಿಸಿ ಉಳಿದ 28 ಜಿಲ್ಲಾ ಪಂಚಾಯತಿಗಳಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ಓದಲಾಗಿರುವ (1) ಪತ್ರದಲ್ಲಿ ₹ 9,67,84,000 ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನ ₹ 3,22,52,000 ಗಳನ್ನು ಬಿಡುಗಡೆ ಮಾಡಬೇಕಾಗಿತ್ತು. ಆದರೆ 2010–11ನೇ ಸಾಲಿನ ವರ್ಷಾಂತ್ಯದಲ್ಲಿ ಕೇಂದ್ರ ಸರ್ಕಾರವು ಚಿಕ್ಕಮಗಳೂರು ಮತ್ತು ಯಾದಗಿರಿ ಜಿಲ್ಲಾ ಪಂಚಾಯತಿಗಳನ್ನು ಹೊರತುಪಡಿಸಿ ಉಳಿದ 28 ಜಿಲ್ಲಾ ಪಂಚಾಯತಿಗಳಿಗೆ ಯೋಜನೆಯಡಿ ಹೆಚ್ಚುವರಿಯಾಗಿ ₹ 5,77,69,000ಗಳನ್ನು ಬಿಡುಗಡೆ ಮಾಡಿತ್ತು. ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು, ರಾಜ್ಯದ ಪಾಲಿನ ಅನುದಾನ ₹ 1,98,25,000 ನ್ನು 2011–12 ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಒದಗಿಸಿದ ಅನುದಾನದಿಂದ ಭರಿಸಿ ಬಿಡುಗಡೆ ಮಾಡಿದ ಕಾರಣ, ರಾಜ್ಯದ ಪಾಲಿನ ಒಂದನೇ ಕಂತಿನ ಅನುದಾನ ₹ 3,11,82,000 ಮಾತ್ರ ಬಿಡುಗಡೆ ಮಾಡಲಾಗಿದೆ.

ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಓದಲಾಗಿದೆ (4) ರ ಪತ್ರದಲ್ಲಿ ಚಿಕ್ಕಮಗಳೂರು ಜಿಲ್ಲಾ ಪಂಚಾಯತಿಗೆ ಒಂದನೇ ಕಂತಿನ ಅನುದಾನ ₹ 38,05,000 ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ₹ 12,68,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 2 ಎಸ್‌ಜೆವೈ (ಡಿಆರ್‌ಡಿಎ) 2011, ಬೆಂಗಳೂರು, ದಿನಾಂಕ 22–11–2011**

ರಾಜ್ಯ ಸರ್ಕಾರವು, ಡಿಆರ್‌ಡಿಎ ಆಡಳಿತ ಯೋಜನೆಯಡಿ 2011–12ನೇ ಸಾಲಿನಲ್ಲಿ ಚಿಕ್ಕಮಗಳೂರು ಜಿಲ್ಲಾ ಪಂಚಾಯತಿಗೆ ಒಂದನೇ ಕಂತಿನ ₹ 12,68,000 ಗಳನ್ನು (₹ ಹನ್ನೆರಡು ಲಕ್ಷದ ಅರವತ್ತೆಂಟು ಸಾವಿರ ಮಾತ್ರ) ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

| ಕ್ರ.ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಜಿ.ಪಂ ಕೋಡ್ | ಡಿ.ಡಿ.ಓ ಕೋಡ್ | 2011–12ನೇ ಸಾಲಿನಲ್ಲಿ ಡಿಆರ್‌ಡಿಎ (ಆಡಳಿತ) ಅಡಿ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಒಂದನೇ ಕಂತಿನ ಅನುದಾನ | ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಒಂದನೇ ಕಂತಿನ ಅನುದಾನ |
|---|---|---|---|---|---|
| 1 | 2 | 3 | 4 | 5 | 6 |
| 1 | ಚಿಕ್ಕಮಗಳೂರು | 408 | 1800ZZ0017 | 38,05,000 | 12,68,000 |

**ಷರತ್ತುಗಳು:**

ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನವನ್ನು ಜಿಲ್ಲಾ ಪಂಚಾಯತ್ ಸಿಬ್ಬಂದಿಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸಲು ಅವಕಾಶವಿದೆ. ಕೇಂದ್ರ ಹಾಗೂ ರಾಜ್ಯದ ಪಾಲಿನ ಅನುದಾನವು ಸೇರಿ ವೆಚ್ಚವನ್ನು ಭರಿಸಬೇಕಾಗಿರುವುದರಿಂದ ರಾಜ್ಯದ ಪಾಲಿನ ಅನುದಾನವನ್ನು ವೇತನ ಮತ್ತು ವೇತನೇತರವೆಂದು ವಿಂಗಡಿಸದೆ ಒಟ್ಟಾರೆ ರಾಜ್ಯದ ಪಾಲಿನ ಅನುದಾನವನ್ನು ಖಜಾನೆಯಿಂದ ಡ್ರಾ ಮಾಡಲು ಖಜಾನಾಧಿಕಾರಿಗಳು ಅನುಮತಿ ನೀಡತಕ್ಕದ್ದು.

ಯೋಜನೆಯ ವೆಚ್ಚವನ್ನು ಲೆಕ್ಕಶೀರ್ಷಿಕೆ; "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196–ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6–ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ–(ಕೇಂದ್ರ ಪುರಸ್ಕೃತ ಯೋಜನೆ) 2011–2012 ಲಿಂಕ್ ಕೋಡ್ 2515–00–196–6–06" (ಹೊಸ ಜಿಲ್ಲಾ ಪಂಚಾಯತ್ ಕೋಡ್ 2515–00–101–0–01) ರಡಿ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ ಎಫ್‌ಡಿ 1 ಜಡ್‌ಪಿಎ 2007 (ಪಿ2) ದಿನಾಂಕ 26–04–2007 ರನ್ವಯ ಜಿಲ್ಲಾ ಪಂಚಾಯತ್ ನಿಧಿ–1ಕ್ಕೆ ಜಮೆ ಮಾಡಿಕೊಂಡು ಆರ್ಥಿಕ ಇಲಾಖೆ (ವೆಚ್ಚ–6) ಯ ಸಂಖ್ಯೆ ಆಇ 172 ವೆಚ್ಚ–6/2011 ದಿನಾಂಕ 30–03–2011 ರ ಸಹಮತಿಯಂತೆ ಪೇಯಿಸ್ ರಸೀದಿಯ ಮೂಲಕ ಜಿಲ್ಲಾ ಪಂಚಾಯತಿ ನಿಧಿಯಿಂದ ಅನುದಾನವನ್ನು ಖಜಾನೆಯಿಂದ ಪಡೆದುಕೊಂಡು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ವೆಚ್ಚವನ್ನು ಭರಿಸತಕ್ಕದ್ದು.

ಚಿಕ್ಕಮಗಳೂರು ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಗಳಿಗೆ ಅನುದಾನವನ್ನು ಖಜಾನೆಯಿಂದ ಸೆಳೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಚಿಕ್ಕಮಗಳೂರು ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಗಳು, ಆಯಾ ತಿಂಗಳ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5ನೇ ತಾರೀಖಿನೊಳಗೆ ನಿರ್ದೇಶಕರು (ಸ್ವಉಕಾ) ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಚಿಕ್ಕಮಗಳೂರು ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನಾ ವರದಿಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪದ ನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ ಇವರ ಸಹಮತಿ ಸಂಖ್ಯೆ:ಗ್ರಾಅಪ 9 ಪಿಬಿಎಸ್ 2011-12 ದಿನಾಂಕ: 03-09-2011ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಅಮಿತಾ ಪ್ರಸಾದ್**

ಸರ್ಕಾರದ ಪ್ರಧಾನ ಕಾರ್ಯದರ್ಶಿ

ಪಿ.ಆರ್. 2749 ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ :** ಮುತ್ತೂಟ್ ಫಿನ್ ಕಾರ್ಪ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು ಈ ಸಂಸ್ಥೆಗೆ ಕರ್ನಾಟಕ ಲೇವಾದೇವಿ ಅಧಿನಿಯಮ 1961 ರಿಂದ ವಿನಾಯಿತಿ ನೀಡುವ ಬಗ್ಗೆ.

**ಓದಲಾಗಿದೆ :** ಸಹಕಾರ ಸಂಘಗಳ ನಿಬಂಧಕರು ಹಾಗೂ ಲೇವಾದೇವಿ ಮಹಾನಿಬಂಧಕರು, ಬೆಂಗಳೂರು ಇವರ ಪತ್ರ ಸಂಖ್ಯೆ : ಎಸ್‌ಎಂಎನ್/ವೈಎಂಸಿ/122/2010-11, ದಿನಾಂಕ : 22-10-2011.

**ಪ್ರಸ್ತಾವನೆ :**

ಮುತ್ತೂಟ್ ಫಿನ್ ಕಾರ್ಪ್ ಪ್ರೈವೇಟ್ ಲಿಮಿಟೆಡ್, ಈ ಸಂಸ್ಥೆಯು ರಿಜಿಸ್ಟ್ರಾರ್ ಆಫ್ ಕಂಪನೀಸ್, ಕೇರಳ ಇವರಿಂದ (ಸಂಖ್ಯೆ : U65929KL1997PLCO11518 ದಿನಾಂಕ : 19-03-2002 ಪ್ರಕಾರ) ನೋಂದಣಿಯಾಗಿದ್ದು ಆರ್‌ಬಿಐನ ಬ್ಯಾಂಕಿಂಗೇತರ ಹಣಕಾಸು ಸಂಸ್ಥೆಗಳ ವಿಭಾಗ ಪ್ರಾಂತೀಯ ಕಛೇರಿ ತಿರುವನಂತಪುರಂ ಇವರಿಂದ (ಸಂಖ್ಯೆ : N-16.00170 ದಿ : 23-07-2002 ಪ್ರಕಾರ) ಎನ್‌ಬಿಎಫ್‌ಸಿ ಸಂಸ್ಥೆ ಎಂದು ಪ್ರಮಾಣ ಪತ್ರ ಪಡೆದಿದ್ದು, ಕರ್ನಾಟಕದಲ್ಲಿಯೂ ಸಹ ಹಣಕಾಸಿನ ವ್ಯವಹಾರಗಳನ್ನು ನಡೆಸುತ್ತಿದ್ದು ತನ್ನ ಎಲ್ಲಾ ಶಾಖೆಗಳಿಗೆ ಸಂಬಂಧಿಸಿದಂತೆ ರೂ. 18.50 ಲಕ್ಷ ಭದ್ರತಾ ಠೇವಣಿಯನ್ನು ಸರ್ಕಾರಕ್ಕೆ ಪಾವತಿಸಿರುತ್ತದೆ. ಈಗ ಸದರಿ ಸಂಸ್ಥೆಯು ಕರ್ನಾಟಕ ಲೇವಾದೇವಿ ಅಧಿನಿಯಮ 1961ರಿಂದ ವಿನಾಯಿತಿ ನೀಡಲು ಸರ್ಕಾರಕ್ಕೆ ದಿನಾಂಕ : 27-12-2010ರಂದು ಅರ್ಜಿ ಸಲ್ಲಿಸಿರುತ್ತಾರೆ.

ಸದರಿ ಮನವಿಯನ್ನು ಸಹಕಾರ ಸಂಘಗಳ ನಿಬಂಧಕರು ಪರಿಶೀಲಿಸಿ ವರದಿ ನೀಡಿರುತ್ತಾರೆ. ಈ ವರದಿಯ ಮೇರೆಗೆ ಭಾರತೀಯ ರಿಸರ್ವ್ ಬ್ಯಾಂಕ್ ಶಿಫಾರಸ್ಸಿನ ಮೇರೆಗೆ ಕರ್ನಾಟಕ ಲೇವಾದೇವಿದಾರರ ಅಧಿನಿಯಮ 1961 ತಿದ್ದುಪಡಿ ತರಲು ಉದ್ದೇಶಿಸಿದ್ದು, ಇದರ ಮೇರೆಗೆ ಬ್ಯಾಂಕಿಂಗೇತರ ಹಣಕಾಸು ಸಂಸ್ಥೆಗಳಿಂದ ಲೇವಾದೇವಿ ಅಧಿನಿಯಮದಿಂದ ಹೊರಗಿಡಲು ಪ್ರಸ್ತಾಪಿಸಲಾಗಿದೆ ಹಾಗೂ ಸದರಿ ಸಂಸ್ಥೆಯು ಸಾರ್ವಜನಿಕರಿಂದ ಕರ್ನಾಟಕ ಲೇವಾದೇವಿ ಅಧಿನಿಯಮದಲ್ಲಿ ನಿಗದಿಪಡಿಸಿರುವ ಬಡ್ಡಿದರಕ್ಕಿಂತ ಹೆಚ್ಚಿನ ಬಡ್ಡಿ ಪಡೆಯುತ್ತಿದ್ದಲ್ಲಿ ಕರ್ನಾಟಕ ಮಿತಿಮೀರಿದ ಬಡ್ಡಿವಿಧಿಸುವಿಕೆಯ ನಿಷೇದ ಅಧಿನಿಯಮ 2004ರಡಿಯಲ್ಲಿ ಕ್ರಮ ಕೈಗೊಳ್ಳಲು ಅವಕಾಶವಿದ್ದು ಸಾರ್ವಜನಿಕರ ಹಿತಾಸಕ್ತಿ ಕಾಪಾಡುವ ಅವಕಾಶವಿರುವುದರಿಂದ ಮುತ್ತೂಟ್ ಫಿನ್ ಕಾರ್ಪ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು ಈ ಸಂಸ್ಥೆಗೆ ಕರ್ನಾಟಕ ಲೇವಾದೇವಿದಾರರ ಅಧಿನಿಯಮ 1961ರ ಪ್ರಕರಣ 2(10))(iv)(ಬಿ)ರಡಿಯಲ್ಲಿ ವಿನಾಯಿತಿ ನೀಡಬಹುದೆಂದು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ. ಮುಂದುವರೆದು, ಸದರಿ ಸಂಸ್ಥೆಯು ಭಾರತೀಯ ರಿಸರ್ವ್ ಬ್ಯಾಂಕ್ ಅಧಿನಿಯಮ 1934ರ ಪ್ರಕರಣ 451A ರಡಿಯಲ್ಲಿ ನೋಂದಣಿಯಾಗಿರುವುದರಿಂದ ಅದರ ವ್ಯವಹಾರಗಳು ಆರ್‌ಬಿಐ ನಿಂದ ನಿಯಂತ್ರಣಕ್ಕೊಳಪಡುತ್ತವೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಒ 23 ಸಿಎಂಎಲ್ 2011, ಬೆಂಗಳೂರು, ದಿನಾಂಕ : 23-11-2011**

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಲೇವಾದೇವಿ ಅಧಿನಿಯಮ 1961ರ ಪ್ರಕರಣ (2)ರ ಖಂಡ 10ರ ಉಪಖಂಡ (iv)ರ ಐಟಂ (ಬಿ) ಅಡಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಮುತ್ತೂಟ್ ಫಿನ್ ಕಾರ್ಪ್ ಪ್ರೈವೇಟ್ ಲಿಮಿಟೆಡ್ ಈ ಸಂಸ್ಥೆಯು ಸದರಿ ಐಟಂನ ಉಪಬಂಧದಿಂದ ಮುಂದಿನ ಆದೇಶದವರೆಗೆ ಈ ಕೆಳಗಿನ ಷರತ್ತುಗಳಿಗೊಳಪಟ್ಟು ವಿನಾಯಿತಿ ನೀಡಲಾಗಿದೆ.

1. ಸಾರ್ವಜನಿಕರಿಂದ/ಗ್ರಾಹಕರಿಂದ ಗಂಭೀರ ದೂರು ದಾಖಲಾಗಿ ಅಧಿಕ ಬಡ್ಡಿ ಪಡೆಯುತ್ತಿರುವುದು ಕಂಡುಬಂದಲ್ಲಿ ನೀಡಲಾದ ವಿನಾಯಿತಿಯನ್ನು ವಾಪಸ್ಸು ಪಡೆಯಲಾಗುವುದು.
2. ಕರ್ನಾಟಕ ಮಿತಿಮೀರಿದ ಬಡ್ಡಿವಿಧಿಸುವಿಕೆಯ ನಿಷೇಧ ಅಧಿನಿಯಮ 2004 ಅನ್ನು ಅನುಸರಿಸುವುದು.
3. ದಿನಾಂಕ : 31-03-2011ರ ಅಂತ್ಯಕ್ಕೆ ಸರ್ಕಾರಕ್ಕೆ ಪಾವತಿಸಿರುವ ಭದ್ರತಾ ಠೇವಣಿ ರೂ. 18.50 ಲಕ್ಷ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್.ನೂಲಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ

ಪಿ.ಆರ್. 2751 ಸಹಕಾರ ಇಲಾಖೆ

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** 2011–12ನೇ ಸಾಲಿನಲ್ಲಿ ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಮತ್ತು ನಿರ್ವಹಣೆಗಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 39 ಅಚವಿ 2008, ದಿನಾಂಕ : 19–01–2009.
2. ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 39 ಅಚವಿ 2008, ದಿನಾಂಕ : 30–03–2009, 20–10–2009, 29–09–2010 ಮತ್ತು 11–02–2010.
3. ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 20 ಎಡಿಎಂ 2011, ದಿನಾಂಕ : 19–03–2011.
4. ಸರ್ಕಾರಿ ಆದೇಶ ಸಂಖ್ಯೆ : ಮಾತಂಇ 20 ಎಂಡಿಎ 2011, ದಿನಾಂಕ : 19–04–2011.
5. ನಿರ್ದೇಶಕರು, ಮಾತಂ, ಜೈತಂ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ : ಡಿಐಟಿ/ಗ್ರಾ.ಬಿ.ಪಿ.ಓ./657/2011–12 ದಿನಾಂಕ : 30–11–2011.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಒಂದು ಲಕ್ಷಕ್ಕಿಂತ ಕಡಿಮೆ ಜನಸಂಖ್ಯೆಯುಳ್ಳ ತಾಲ್ಲೂಕು/ಹೋಬಳಿ ಕೇಂದ್ರ ಸ್ಥಳಗಳಲ್ಲಿ ಗ್ರಾಮಾಂತರ ಬಿ.ಪಿ.ಓ. ಕೇಂದ್ರಗಳನ್ನು ಸ್ಥಾಪಿಸುವ ಹೊಸ ಯೋಜನೆಯನ್ನು 2008–09ನೇ ಸಾಲಿನಿಂದ ಅನುಷ್ಠಾನಗೊಳಿಸಲು ಹಾಗೂ 100 ವ್ಯಕ್ತಿಗಳಿಗೆ ಕಡಿಮೆ ಇಲ್ಲದಂತೆ ನೇರ ಉದ್ಯೋಗವನ್ನು ನೀಡುವ ಗ್ರಾಮೀಣ ಬಿಪಿಓ ಕೇಂದ್ರವು ರಾಜ್ಯ ಸರ್ಕಾರದಿಂದ ಆರ್ಥಿಕ ಬೆಂಬಲಕ್ಕೆ ಅರ್ಹವಾಗಿರುವ ಬಗ್ಗೆ ಆದೇಶವನ್ನು ಹೊರಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ 2008–09ನೇ ಸಾಲಿನಿಂದ ಇಲ್ಲಿಯವರೆಗೆ ರೂ. 8.20 ಕೋಟಿಗಳನ್ನು ರಾಜ್ಯದಲ್ಲಿ ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸಲು ಬಿಡುಗಡೆ ಮಾಡಲಾಗಿದೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ : 19–03–2011ರ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಮತ್ತು ವಿಜ್ಞಾನ ತಂತ್ರಜ್ಞಾನ ಇಲಾಖೆಯ ಮಾಹಿತಿ ತಂತ್ರಜ್ಞಾನ ಜೈವಿಕ ತಂತ್ರಜ್ಞಾನ ವಿಭಾಗದಲ್ಲಿ ಚಾಲ್ತಿಯಲ್ಲಿರುವ ಸದರಿ ಯೋಜನೆಯನ್ನು 2011–12ನೇ ಸಾಲಿಗೆ ಮುಂದುವರಿಸಲಾಗಿದೆ.

ಮೇಲೆ (4)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಹಾಗೂ ನಿರ್ವಹಣೆಗಾಗಿ ಆರ್ಥಿಕ ಬೆಂಬಲ ನೀಡಲು 2011–12ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 3451–00=–090–2–23 ಗ್ರಾಮೀಣ ಬಿಪಿಓಗಳು–059 ಇತರೆ ಖರ್ಚುಗಳ ಇದರಡಿಯಲ್ಲಿ ಒದಗಿಸಲಾಗಿರುವ ರೂ. 500.00 ಲಕ್ಷಗಳ ಅನುದಾನದಲ್ಲಿ ರೂ. 100.00 ಲಕ್ಷಗಳನ್ನು ಬಿಡುಗಡೆ ಮಾಡಿದೆ.

ಮೇಲೆ (5)ರಲ್ಲಿ ಓದಲಾದ ನಿರ್ದೇಶಕರು, ಮಾತಂ, ಜೈತಂ ನಿರ್ದೇಶನಾಲಯ, ಬೆಂಗಳೂರು ಇವರ ದಿನಾಂಕ : 30–11–2011ರ ಪತ್ರದಲ್ಲಿ ಗ್ರಾಮೀಣ ಬಿ.ಪಿ.ಓ. ಯೋಜನೆಯಡಿಯಲ್ಲಿ ಕೆಬಿಟ್ಸ್‌ನಿಂದ 2008–09ನೇ ಸಾಲಿನಿಂದ ಇಲ್ಲಿಯವರೆಗೆ ಒಟ್ಟು 38 ಗ್ರಾಮೀಣ ಬಿ.ಪಿ.ಓ. ಘಟಕಗಳಿಗೆ ಮಂಜೂರಾತಿ ನೀಡಿದ್ದು, ಅದರಲ್ಲಿ 30 ಕೇಂದ್ರಗಳು ಕಾರ್ಯಾರಂಭ ಮಾಡಿರುತ್ತದೆ. ಈ ಯೋಜನೆಯಡಿ ರೂ. 920.00 ಲಕ್ಷಗಳು ಬಿಡುಗಡೆಯಾಗಿದ್ದು, ಇದರಲ್ಲಿ 23 ಗ್ರಾಮೀಣ ಬಿ.ಪಿ.ಓ. ಘಟಕಗಳಿಗೆ ಒಟ್ಟು ರೂ. 553.00 ಲಕ್ಷಗಳ ಸಹಾಯಧನ ಮಾಡಲಾಗಿದೆ ಎಂದು ತಿಳಿಸುತ್ತಾ, ಹೊಸದಾಗಿ ಗ್ರಾಮೀಣ ಬಿ.ಪಿ.ಓ. ಘಟಕಗಳನ್ನು ತೆರೆಯಲು ರೂ. 100.00 ಲಕ್ಷಗಳ ಅಗತ್ಯವಿದ್ದು, ಬಿಡುಗಡೆ ಮಾಡುವಂತೆ ಕೋರಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ರೂ. 100.00 ಲಕ್ಷಗಳನ್ನು ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಐಟಿಡಿ 20 ಎಂಡಿಎ 2011, ಬೆಂಗಳೂರು, ದಿನಾಂಕ : 30–11–2011**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಗ್ರಾಮೀಣ ಬಿ.ಪಿ.ಓ. ಕೇಂದ್ರಗಳನ್ನು ಸ್ಥಾಪಿಸುವ ಹಾಗೂ ನಿರ್ವಹಣೆಗಾಗಿ ಆರ್ಥಿಕ ಬೆಂಬಲ ನೀಡಲು 2011–12ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 3451–00–090–2–23 ಗ್ರಾಮೀಣ ಬಿಪಿಓಗಳು–059 ಇತರೆ ಖರ್ಚುಗಳು ಇದರಡಿಯಲ್ಲಿ ಒದಗಿಸಲಾಗಿರುವ ರೂ. 500.00 ಲಕ್ಷಗಳ ಅನುದಾನದಲ್ಲಿ ಹೊಸದಾಗಿ ಗ್ರಾಮೀಣ ಬಿ.ಪಿ.ಓ. ಘಟಕಗಳನ್ನು ತೆರೆಯಲು ರೂ. 100.00 ಲಕ್ಷಗಳ (ರೂ. ನೂರು ಲಕ್ಷಗಳು ಮಾತ್ರ) ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಬೆಂಗಳೂರು ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಬೆಂಗಳೂರು, ಇವರು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಬೆಂಗಳೂರು, ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ಪ್ರಧಾನ ವ್ಯವಸ್ಥಾಪಕರು, ಕೆಬಿಟ್ಸ್ ಇವರಿಗೆ ವಿತರಿಸತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 3451–00–090–2–23 ಗ್ರಾಮೀಣ ಬಿಪಿಓಗಳು–059 ಇತರೆ ಖರ್ಚುಗಳು ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಬೆಂಗಳೂರು, ಇವರು ಅನುದಾನದ ಬಳಕೆಯ ಬಗ್ಗೆ ಪ್ರಧಾನ ವ್ಯವಸ್ಥಾಪಕರು, ಕೆಬಿಟ್ಸ್ ಸಂಸ್ಥೆ ಇವರಿಂದ (ಸಂಬಂಧಪಟ್ಟ ಗ್ರಾಮೀಣ ಬಿಪಿಓ ಕೇಂದ್ರಗಳಿಂದ ಉಪಯೋಗಿತಾ ದೃಢೀಕರಣ ಪತ್ರಗಳನ್ನು ಹಾಗೂ ವೆಚ್ಚ ಮಾಡಿದ ಅನುದಾನದ ವಿವರಗಳನ್ನು ಪಡೆದು) ಉಪಯೋಗಿತಾ ದೃಢೀಕರಣ ಪತ್ರವನ್ನು ಮತ್ತು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 01 ಟಿಎಫ್‌ಪಿ 2008 ದಿನಾಂಕ : 16–05–2008 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಇ.ರಾಮಕೃಷ್ಣಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ

ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್. 2752

## COMMERCE AND INDUSTRIES SECRETARIAT

**Sub:** Reimbursement of Central Sales Tax paid on inter-state sale of metro coaches by M/s BEML Ltd. to Delhi Metro Rail Corporation-Reg.

***Read:*** 1. G.O. No. FD 283 CSL 2009 dated : 08-12-2009.
2. G.O. No. CI 430 SPI 2010, dated : 20-09-2010.
3. G.O. No. CI 430 SPI 2010, dated : 21-02-2011.

**PREAMBLE:**

In the Govt. Order read at (1) above, sanction was accorded for reimbursement of tax paid under the Central Sales Tax Act, 1956 by BEML, on its Inter-State sale of Metro coaches to Delhi Metro Rail Corporation.

In the G.O. read at (2) above, Rs. 46.88 crores was released towards reimbursement of central sales tax to BEML paid up to June 2010 as interest free loan to be converted into grant subsequently.

A proposal was sent to FD for release of Rs. 21.75 Crores for reimbursement of Central sales tax paid by BEMl till December 2010. However Rs. 13.42 crores was released vide GO No. CI 430 SPI 2010, dated : 21-02-2011 as per the concurrence of FD.

Now FD has concurred for the release of Rs. 2,24,25,549/- which is the reimbursement of central sales tax paid by BEML during January and March 2011. Hence the following order.

**GOVERNMENT ORDER NO. CI 430 SPI 2010, BANGALORE, DATED: 21-11-2011.**

For the reasons explained above, sanction is hereby accorded for the release of Rs. 2,24,25,549/- (Rs. Two crores twenty four lakhs twenty five thousand five hundred and forty nine only) under the Head of A/c "2852-80-800-0-43" (plan) 059- other expenses towards reimbursement of sales tax to BEML for the months of Jan 2011 and March 2011 to BEML.

The Deputy General Manager (Finance & Accounts), Bangalore Complex, BEML Ltd., is authorized to draw the amount on payee's receipt duly countersigned by Commissioner for Industrial Development and Director of Industries and Commerce Dept.

This order is issued with the concurrences of Finance Dept. vide its U.O. Note No. FD.820 Exp-I/2011 dated : 09-11-2011.

By Order and in the name of the Governor of Karnataka
**SHIVASHANKAR NAIK**
Desk Officer (Technical Cell) (I/c)
Commerce and Industries Department.

PR No. 2753

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಮುನೇನಕೊಪ್ಪ ಎಂ.ಬಿ. ಜಿಲ್ಲಾ ಕ್ಷಯ ರೋಗ ನಿಯಂತ್ರಣ ಅಧಿಕಾರಿ, ಹುಬ್ಬಳ್ಳಿ, ಇವರ ರಾಜೀನಾಮೆಯನ್ನು ಅಂಗೀಕರಿಸುವ ದಿನಾಂಕವನ್ನು ಮಾರ್ಪಡಿಸಿ ರಾಜೀನಾಮೆಯನ್ನು ಅಂಗೀಕರಿಸುವ ಕುರಿತು.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಆಕುಕ 277 ಹೆಚ್‌ಎಸ್‌ಹೆಚ್ 2010, ದಿನಾಂಕ : 19–07–2010.
2. ಡಾ॥ ಎಂ.ಬಿ. ಮುನೇನಕೊಪ್ಪ, ವೈದ್ಯಾಧಿಕಾರಿ ಇವರ ಮನವಿ ಪತ್ರ ದಿನಾಂಕ : 06–04–2011.
3. ಜಿಲ್ಲಾ ಆಕುಕ ಅಧಿಕಾರಿ, ಧಾರವಾಡ ಇವರ ಅಧಿಕೃತ ಜ್ಞಾಪನ ಸಂಖ್ಯೆ : ಜಿಆಕುಕ/ಸಿಬ್ಬಂದಿ(1)ವಹಿ/2009–10, ದಿನಾಂಕ : 30–01–2010, 11–03–2010, 05–04–2010 ಮತ್ತು 07–06–2010.

**ಪ್ರಸ್ತಾವನೆ :**

ಡಾ॥ ಮುನೇನಕೊಪ್ಪ ಎಂ.ಬಿ. (ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ) ಜಿಲ್ಲಾ ಕ್ಷಯ ರೋಗ ನಿಯಂತ್ರಣಾಧಿಕಾರಿ, ಹುಬ್ಬಳ್ಳಿ ಇವರು ಸರ್ಕಾರಿ ಸೇವೆಗೆ ನೀಡಿದ್ದ ರಾಜೀನಾಮೆಯನ್ನು ದಿನಾಂಕ : 15–10–2009ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಮೇಲೆ ಕ್ರಮಾಂಕ(1)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ : 22–07–2010ರಲ್ಲಿ ಅಂಗೀಕರಿಸಲಾಗಿತ್ತು. ಆದರೆ ಸದರಿ ವೈದ್ಯರು ಸರ್ಕಾರಿ ಸೇವೆಗೆ ನೀಡಿದ ರಾಜೀನಾಮೆಯ ಬಗ್ಗೆ ಯಾವುದೇ ಆದೇಶ ಸರಿಯಾದ ಸಮಯಕ್ಕೆ ಬಾರದೇ ಇದ್ದುದರಿಂದ ಕರ್ತವ್ಯದಲ್ಲಿ ಮುಂದುವರೆದಿರುವುದಾಗಿ ಕೆಲವೊಂದು ಅವಧಿಗೆ ಧಾರವಾಡ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು ರಜೆಯನ್ನು ಮಂಜೂರು ಮಾಡಿದ್ದು, ಮಹಾಲೇಖಪಾಲರು ಕರ್ನಾಟಕ ಇವರು ನೀಡಿದ ಪೇ ಸ್ಲಿಪ್ ಆಧಾರದ ಮೇಲೆ ದಿನಾಂಕ : 18–01–2010 ರವರೆಗೆ ಸಂಬಳ ಪಡೆದಿರುವುದರಿಂದ ರಾಜೀನಾಮೆಯನ್ನು ಅಂಗೀಕರಿಸಿದ ಆದೇಶವನ್ನು ಪರಿಷ್ಕರಿಸಿ ದಿನಾಂಕ : 22–07–2010 ರಿಂದ ಅಂಗೀಕರಿಸಲು ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ಮನವಿಯಲ್ಲಿ ಕೋರಿರುತ್ತಾರೆ.

ಧಾರವಾಡ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಯವರು ಸದರಿ ವೈದ್ಯರಿಗೆ ಮೇಲೆ ಕ್ರಮಾಂಕ (3)ರಲ್ಲಿ ಓದಲಾದ ಅಧಿಕೃತ ಜ್ಞಾಪನ ಪತ್ರಗಳಲ್ಲಿ ಸದರಿ ವೈದ್ಯರು ರಾಜೀನಾಮೆ ನೀಡಿದ ಪೂರ್ವದ ಮತ್ತು ನಂತರದ ಅವಧಿಗೆ ಕೆಳಕಂಡಂತೆ ವಿವಿಧ ರಜೆಯನ್ನು ಮಂಜೂರು ಮಾಡಿದ್ದಾರೆ.

1. ದಿನಾಂಕ : 15–09–2009 ರಿಂದ 25–10–2009 ರವರೆಗೆ 41 ದಿನ ಗಳಿಕೆ ರಜೆ.
2. ದಿನಾಂಕ : 28–10–2009 ರಿಂದ 26–11–2009 ರವರೆಗೆ 30 ದಿನಗಳ ಸಂಯುಕ್ತ ರಜೆ.
3. ದಿನಾಂಕ : 01–12–2009 ರಿಂದ 09–12–2009 ರವರೆಗೆ 09 ದಿನಗಳ ಪರಿವರ್ತಿತ ರಜೆ.
4. ದಿನಾಂಕ : 10–12–2009 ರಿಂದ 31–12–2009 ರವರೆಗೆ ವೈದ್ಯಕೀಯ ಕಾರಣಗಳ ಮೇಲೆ ವೇತನ ರಹಿತ ರಜೆ.
5. ದಿನಾಂಕ : 01–01–2010 ರಿಂದ 15–01–2010 ರವರೆಗೆ ಗಳಿಕೆ ರಜೆ.

6. ದಿನಾಂಕ : 16-01-2010 ರಿಂದ 20-01-2010 ರವರೆಗೆ ಪರಿವರ್ತಿತ ರಜೆ.
7. ದಿನಾಂಕ : 21-01-2010 ರಿಂದ 28-01-2010 ವೈದ್ಯಕೀಯ ಕಾರಣಗಳ ಮೇಲೆ ವೇತನ ರಹಿತ ರಜೆ.

ಮಹಾಲೇಖಪಾಲರು ಜರೆ ಹಕ್ಕು ಪತ್ರ ಷರತ್ತಿಗೆ ಒಳಪಟ್ಟು ದಿನಾಂಕ : 05-04-2010 ರಿಂದ 02-06-2010 ರವರೆಗೆ ಮತ್ತು 07-06-2010 ರಿಂದ 04-08-2010 ರವರೆಗೆ 59 ದಿನ ರಜೆಯ ಮೇಲೆ ಹೋಗಲು ಅನುಮತಿ ನೀಡಿದ್ದರು.

ಸದರಿ ವೈದ್ಯರು ಸರ್ಕಾರಿ ಕೆಲಸಕ್ಕೆ ರಾಜೀನಾಮೆ ನೀಡಿದ ದಿನಾಂಕದಿಂದ ಧಾರವಾಡ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಯವರು ಇವರನ್ನು ಸರ್ಕಾರಿ ಕೆಲಸದಿಂದ ಮುಕ್ತಗೊಳಿಸದೇ ಇದ್ದುದರಿಂದ ಇವರು ಸೇವೆಯಲ್ಲಿ ಮುಂದುವರೆದು ಕರ್ತವ್ಯ ನಿರ್ವಹಿಸುತ್ತಿರುವುದರಿಂದ ಮತ್ತು ಕೆಲವೊಂದು ಅವಧಿಗೆ ಧಾರವಾಡ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಯವರು ರಜೆಯನ್ನು ಮಂಜೂರು ಮಾಡಿ ರಜಾ ಅವಧಿಯನ್ನು ಸಕ್ರಮಗೊಳಿಸಿರುವುದರಿಂದ, ಅಲ್ಲದೆ ಕರ್ತವ್ಯ ನಿರ್ವಹಿಸಿದ ಮತ್ತು ರಜಾ ಅವಧಿಗೆ ವೇತನ ಪಡೆದಿರುವುದರಿಂದ ಇವರ ರಾಜೀನಾಮೆಯನ್ನು ಅಂಗೀಕರಿಸಿದ ದಿನಾಂಕವನ್ನು ಮಾರ್ಪಡಿಸಬೇಕಾಗಿರುವುದು ಅವಶ್ಯಕವಾಗಿದೆ ಎಂದು ಸರ್ಕಾರ ತೀರ್ಮಾನಿಸಿದೆ.

ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಆಕುಕ 277 ಹೆಚ್‌ಎಸ್‌ಹೆಚ್ 2011, ಬೆಂಗಳೂರು, ದಿನಾಂಕ : 07-10-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಡಾ॥ ಎಂ.ಬಿ. ಮುನೇನಕೊಪ್ಪ (ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ) ಜಿಲ್ಲಾ ಕ್ಷಯ ರೋಗ ನಿಯಂತ್ರಣಾಧಿಕಾರಿ, ಹುಬ್ಬಳ್ಳಿ ಇವರು ನೀಡಿರುವ ರಾಜೀನಾಮೆಯನ್ನು ದಿನಾಂಕ : 22-07-2010ರ ಕ್ರಮಾಂಕ ಆಕುಕ 277 ಹೆಚ್‌ಎಸ್‌ಹೆಚ್ 2010ರ ಸರ್ಕಾರಿ ಆದೇಶದಲ್ಲಿ ದಿನಾಂಕ : 15-10-2009 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅಂಗೀಕರಿಸಿರುವುದನ್ನು ಮಾರ್ಪಡಿಸಿ ಇವರ ರಾಜೀನಾಮೆಯನ್ನು ದಿನಾಂಕ : 22-07-2010 ರಿಂದ ಜಾರಿಗೆ ಬರುವಂತೆ ಅಂಗೀಕರಿಸಿದೆ ಮತ್ತು ದಿನಾಂಕ : 05-04-2010 ರಿಂದ 02-06-2010 ಮತ್ತು 07-06-2010 ರಿಂದ 21-07-2010 ರವರೆಗಿನ ಅವಧಿಗೆ ಅವರ ಹಕ್ಕಿನಲ್ಲಿರುವ ರಜೆ, ಒಂದು ವೇಳೆ ರಜೆ ಇಲ್ಲದಿದ್ದಲ್ಲಿ ಈ ಅವಧಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಗಲ ನಿಯಮ 106(ಎ) ರನ್ವಯ ವೇತನ ರಹಿತ ರಜೆಯನ್ನು ಮಂಜೂರು ಮಾಡಿ ಸಕ್ರಮಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಚಿಕ್ಕೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು-1 & 2)

ಪಿ.ಆರ್. 2754

## ಕಂದಾಯ ಸಚಿವಾಲಯ

**ವಿಷಯ :** ಹಾವೇರಿ ಜಿಲ್ಲೆಯ ಶಿಗ್ಗಾಂವ್ ವಿಧಾನ ಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.
**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ : ಕಂಇ 73 ಮುಸರ 2009, ದಿನಾಂಕ : 25-02-2009.

**ಪ್ರಸ್ತಾವನೆ :**

ಮೇಲೆ ಓದಲಾದ ಆದೇಶದಲ್ಲಿ ಹಾವೇರಿ ಜಿಲ್ಲೆಯ ಶಿಗ್ಗಾಂವ್ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ಈ ಕೆಳಕಂಡವರೊಂದಿಗೆ ರಚಿಸಲು ಆದೇಶಿಸಲಾಗಿತ್ತು.

| | | |
|---|---|---|
| 1 | ಮಾನ್ಯ ವಿಧಾನಸಭಾ ಸದಸ್ಯರು, ಶಿಗ್ಗಾಂವ್ ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| 2 | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಹಾವೇರಿ ಜಿಲ್ಲೆ | ಸದಸ್ಯರು |
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಶಿಗ್ಗಾಂವ್ ತಾಲ್ಲೂಕು | ಸದಸ್ಯರು |
| 4 | ತಹಶೀಲ್ದಾರ್, ಶಿಗ್ಗಾಂವ್ ತಾಲ್ಲೂಕು, ಹಾವೇರಿ ಜಿಲ್ಲೆ | ಸದಸ್ಯ ಕಾರ್ಯದರ್ಶಿ |

ಮುಂದುವರೆದು, ನಾಲ್ಕು ಅಧಿಕಾರೇತರ ಸದಸ್ಯರನ್ನು ನಂತರ ನಾಮ ನಿರ್ದೇಶನ ಮಾಡಲಾಗುವುದೆಂದು ನಮೂದಿಸಲಾಗಿತ್ತು.

ಈ ಹಿನ್ನೆಲೆಯಲ್ಲಿ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 83 ಮುಸರ 2011, ಬೆಂಗಳೂರು, ದಿನಾಂಕ : 29-11-2011**

ಹಾವೇರಿ ಜಿಲ್ಲೆಯ ಶಿಗ್ಗಾಂವ್ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡಂತೆ ಅಧಿಕಾರೇತರ ಸದಸ್ಯರನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರಮ ಸಂ. | ಹೆಸರು/ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ಸುರೇಶ ತಮ್ಮಣ್ಣ ಗಾಣಗೇರ<br>ಸಾ : ಸವಣೂರ, ಸವಣೂರ ತಾಲ್ಲೂಕು | ಸಾಮಾನ್ಯ |
| 2 | ಶ್ರೀಮತಿ ಕರಬಸಪ್ಪ ಈಳಗೇರ<br>ಸಾ : ಹೋತನಹಳ್ಳಿ, ಶಿಗ್ಗಾಂವ ತಾಲ್ಲೂಕು | ಮಹಿಳೆ |
| 3 | ಶ್ರೀ ಚಂದ್ರಪ್ಪ ಸಹದೇವಪ್ಪ ಗಂಗಣ್ಣವರ<br>ಸಾ : ಹುಲಗೂರ, ಶಿಗ್ಗಾಂವ ತಾಲ್ಲೂಕು | ಪರಿಶಿಷ್ಟ ಜಾತಿ |
| 4 | ಶ್ರೀ ಉಮೇಶಗೌಡ ಮಹಾದೇವಗೌಡ ಪಾಟೀಲ<br>ಸಾ : ಶ್ಯಾಡಂಬಿ, ಶಿಗ್ಗಾಂವ ತಾಲ್ಲೂಕು | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ : 03-02-2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ, ಇವರೆಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ಥಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಉಮಾಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2755 ಕಂದಾಯ ಇಲಾಖೆ (ಮುಜರಾಯಿ)

## ಕಂದಾಯ ಸಚಿವಾಲಯ

**ವಿಷಯ :** 2011ನೇ ಸಾಲಿನಲ್ಲಿ ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿಗೆ ಸಂಬಂಧಿಸಿದಂತೆ, ತುರ್ತು ಪರಿಹಾರ ಕ್ರಮ ಕೈಗೊಳ್ಳಲು ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ ಪತ್ರಗಳು.

**ಪ್ರಸ್ತಾವನೆ :**

2011ನೇ ಸಾಲಿನಲ್ಲಿ ಮುಂಗಾರು ಮಳೆ ವಿಫಲವಾಗಿ, ರಾಜ್ಯದ 23 ಜಿಲ್ಲೆಗಳ 99 ತಾಲ್ಲೂಕುಗಳಲ್ಲಿ ಬರ ಪರಿಸ್ಥಿತಿ ಉಂಟಾಗಿರುತ್ತದೆ. ಬರ ಪರಿಸ್ಥಿತಿಯನ್ನು ಎದುರಿಸಲು ಕುಡಿಯುವ ನೀರು ಸರಬರಾಜು, ಜಾನುವಾರುಗಳಿಗೆ ಮೇವು ಒದಗಿಸುವ ಮತ್ತು ಜಾನುವಾರು ಸಂರಕ್ಷಣೆ ಕಾರ್ಯಗಳನ್ನು ಕೈಗೊಳ್ಳಬೇಕಾಗಿರುತ್ತದೆ. ಆದ್ದರಿಂದ ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿಯನ್ನು ನಿಭಾಯಿಸಲು ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವಂತೆ ಜಿಲ್ಲಾಧಿಕಾರಿಗಳು ಬೇಡಿಕೆ ಸಲ್ಲಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಜಿಲ್ಲಾಧಿಕಾರಿಗಳು ಪ್ರಸ್ತಾವನೆಗಳನ್ನು ಕೂಲಂಕಷವಾಗಿ, ಪರಿಶೀಲಿಸಿ, ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿಯನ್ನು ನಿಭಾಯಿಸಲು ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 190 ಟಿಎನ್‌ಆರ್ 2011, ಬೆಂಗಳೂರು, ದಿನಾಂಕ : 30-11-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮುಂಗಾರು ಮಳೆಯ ಕೊರತೆಯಿಂದ ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿಗೆ ಸಂಬಂಧಿಸಿದಂತೆ ಹಾನಿಗಳಿಗೆ ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಈ ಕೆಳಕಂಡಂತೆ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರಮ ಸಂ. | ಜಿಲ್ಲೆಯ ಹೆಸರು | ಬಿಡುಗಡೆ ಮಾಡಿದ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|
| 1 | ಬಾಗಲಕೋಟೆ | 150.00 |
| 2 | ಕೋಲಾರ | 150.00 |
| 3 | ಮೈಸೂರು | 50.00 |
| 4 | ರಾಮನಗರ | 50.00 |
| | ಒಟ್ಟು | 400.00 |

(ರೂ. ನಾಲ್ಕು ನೂರು ಲಕ್ಷಗಳು ಮಾತ್ರ)

1. ಮೇಲಿನಂತೆ ಬಿಡುಗಡೆ ಮಾಡಿದ ಹಣವನ್ನು ಈ ಕೆಳಕಂಡಂತೆ ಆದ್ಯತೆಯ ಮೇರೆಗೆ ಉಪಯೋಗಿಸುವುದು.

ಅ) ಮಾನವ/ಪ್ರಾಣಿ ಜೀವಹಾನಿ

ಆ) ಬೆಳೆ ಹಾನಿ

ಇ) ಕುಡಿಯುವ ನೀರಿನ ವ್ಯವಸ್ಥೆ

ಈ) ಜಾನುವಾರುಗಳ ಸಂರಕ್ಷಣೆ

ಉ) ಮೂಲಭೂತ ಸೌಕರ್ಯಗಳಿಗೆ ತುರ್ತು ರಿಪೇರಿ

2) ಕೇಂದ್ರ ಸರ್ಕಾರವು ಹೊರಡಿಸಿರುವ ಮಾರ್ಗಸೂಚಿಗಳ ಪ್ರಕಾರ ವೆಚ್ಚ ಮಾಡುವುದು.

3) ಅನುದಾನದ ಲಭ್ಯತೆ ಇಲ್ಲದೇ ಯಾವುದೇ ದುರಸ್ತಿ ಕಾಮಗಾರಿಗಳನ್ನು ಎಸ್.ಡಿ.ಆರ್.ಎಫ್/ಎನ್‌ಸಿಸಿಎಫ್ ಅಡಿಯಲ್ಲಿ ಕೈಗೊಳ್ಳುವಂತಿಲ್ಲ. ಹಾಗೂ ಕಾಮಗಾರಿಗಳನ್ನು ಬಿಡುಗಡೆಯಾದ ಅನುದಾನಕ್ಕೆ ಸೀಮಿತಗೊಳಿಸುವುದು.

4) ಪ್ರಕೃತಿ ವಿಕೋಪದಿಂದ ಆದಂತಹ ವಿಪತ್ತು ಹಾನಿಗೆ ಮಾತ್ರ ಪರಿಹಾರ ನೀಡುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಎಸ್.ಡಿ.ಆರ್.ಎಫ್ ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು 2011–12ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2245–01–102–0–00–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ:ಆ.ಈ.:968:ವೆಚ್ಚ–7/2011 ದಿನಾಂಕ : 16–10–2011ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಎಂ. ಆನಂದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ
(ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

ಪಿ.ಆರ್. 2756

## ಆರ್ಥಿಕ ಸಚಿವಾಲಯ

**ವಿಷಯ :** ಸರ್. ಎಂ. ವಿಶ್ವೇಶ್ವರಯ್ಯನವರ ಜನ್ಮ ದಿನೋತ್ಸವದ ನಿಮಿತ್ತ ಲೋಕೋಪಯೋಗಿ, ನೀರಾವರಿ ಮತ್ತು ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಅಧಿಕಾರಿಗಳು ಭಾಗವಹಿಸಲು ವಿಶೇಷ ಸಾಂದರ್ಭಿಕ ರಜೆ ಮಂಜೂರು ಮಾಡುವ ಬಗ್ಗೆ.

**ಪ್ರಸ್ತಾವನೆ :**

ಭಾರತದ ಇಂಜಿನಿಯರುಗಳ ಸಂಸ್ಥೆ ಮತ್ತು ಇಂಡಿಯನ್ ರೋಡ್ ಕಾಂಗ್ರೆಸ್ ಸಭೆಗಳಿಗೆ ಮತ್ತು ವಾರ್ಷಿಕ ಸಮ್ಮೇಳನಗಳಿಗೆ ಹಾಜರಾಗಲು ಲೋಕೋಪಯೋಗಿ ಇಲಾಖೆಯ ಅಧಿಕಾರಿಗಳಿಗೆ (ಪತ್ರಾಂಕಿತವಲ್ಲದ ಅಧಿಕಾರಿಗಳೂ ಸೇರಿದಂತೆ) ಅನುಮತಿಸಲಾಗಿದೆ. ಇಂಥ ಗೈರು ಹಾಜರಿಯನ್ನು ವಿಶೇಷ ಸಾಂದರ್ಭಿಕ ರಜೆ ಎಂದು ಪರಿಗಣಿಸಿ, ಇಂಥ ವಿಶೇಷ ಸಾಂದರ್ಭಿಕ ರಜೆಯು ವರ್ಷಕ್ಕೆ 15 ದಿನಗಳು ಮೀರದಂತೆ ನಿರ್ಬಂದಿಸಲಾಗಿದೆ. ಭಾರತ ರತ್ನ ಸರ್. ಎಂ. ವಿಶ್ವೇಶ್ವರಯ್ಯನವರ ಜನ್ಮ ದಿನವನ್ನು ಇಂಜಿನಿಯರ್ ದಿನ ಎಂದು ಆಚರಿಸುತ್ತಿದ್ದು, ಸದರಿ ಇಂಜಿನಿಯರ್ ದಿನದಂದು ಲೋಕೋಪಯೋಗಿ, ನೀರಾವರಿ ಮತ್ತು ಪಂಚಾಯತ್‌ರಾಜ್ ಇಂಜಿನಿಯರಿಂಗ್ ಇಲಾಖೆಯ ಅಧಿಕಾರಿಗಳು ಭಾಗವಹಿಸಲು ಅನುಕೂಲವಾಗುವಂತೆ ಕರ್ನಾಟಕ ಸರ್ಕಾರಿ ನೌಕರರಿಗೆ ಸಾಂದರ್ಭಿಕ ರಜೆ ಮಂಜೂರು ಮಾಡುವುದನ್ನು ವಿನಿಯಮನಗೊಳಿಸುವುದಕ್ಕೆ ಸಂಬಂಧಿಸಿದ ನಿಯಮಗಳ (ಅನುಬಂಧ 'ಬಿ'ಯ) ನಿಯಮ 13(ಎ)ರಲ್ಲಿ ಅವಕಾಶವಿರುವ 15 ದಿನಗಳ ಮಿತಿಯಲ್ಲೇ ವಿಶೇಷ ಸಾಂದರ್ಭಿಕ ರಜೆಯನ್ನು ಮಂಜೂರು ಮಾಢಲು ಲೋಕೋಪಯೋಗಿ ಇಲಾಖೆಯು ಪ್ರಸ್ತಾಪಿಸಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳ ಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆಇ 4 ಸೇನಿಸೇ 2011, ಬೆಂಗಳೂರು, ದಿನಾಂಕ: 02 ನೇ ನವೆಂಬರ್ 2011.**

ಭಾರತದ ಇಂಜಿನಿಯರುಗಳ ಸಂಸ್ಥೆ ಮತ್ತು ಇಂಡಿಯನ್ ರೋಡ್ ಕಾಂಗ್ರೆಸ್ ಸಭೆಗಳಿಗೆ ಮತ್ತು ವಾರ್ಷಿಕ ಸಮ್ಮೇಳನಗಳಿಗೆ ಹಾಗೂ ಭಾರತ ರತ್ನ ಸರ್. ಎಂ. ವಿಶ್ವೇಶ್ವರಯ್ಯನವರ ಜನ್ಮ ದಿನವನ್ನು ಇಂಜಿನಿಯರ್ ದಿನ ಎಂದು ಆಚರಿಸುತ್ತಿದ್ದು, ಸದರಿ ಇಂಜಿನಿಯರ್ ದಿನದಂದು ಹಾಜರಾಗಲು ಲೋಕೋಪಯೋಗಿ, ನೀರಾವರಿ ಮತ್ತು ಪಂಚಾಯತ್‌ರಾಜ್ ಇಂಜಿನಿಯರಿಂಗ್ ಇಲಾಖೆಯ ಅಧಿಕಾರಿಗಳಿಗೆ (ಪತ್ರಾಂಕಿತವಲ್ಲದ ಅಧಿಕಾರಿಗಳು ಸೇರಿದಂತೆ) ಅನುಮತಿಸಲಾಗಿದೆ. ಇಂಥ ಗೈರು ಹಾಜರಿಯನ್ನು ವಿಶೇಷ ಸಾಂದರ್ಭಿಕ ರಜೆ ಎಂದು ಪರಿಗಣಿಸಿದೆ. ಇಂಧ ವಿಶೇಷ ಸಾಂದರ್ಭಿಕ ರಜೆಯು ವರ್ಷಕ್ಕೆ 15 ದಿನಗಳು ಮೀರದಂತೆ ನಿರ್ಬಂದಿಸಲಾಗಿದೆ.

ಕರ್ನಾಟಕ ಸರ್ಕಾರಿ ನೌಕರರಿಗೆ ಸಾಂದರ್ಭಿಕ ರಜೆ ಮಂಜೂರು ಮಾಡುವುದನ್ನು ವಿನಿಯಮನಗೊಳಿಸುವುದಕ್ಕೆ ಸಂಬಂಧಿಸಿದ ನಿಯಮಗಳ (ಅನುಬಂಧ 'ಬಿ'ಯ) ನಿಯಮ 13(ಎ), ಈ ಮೇಲ್ಕಂಡಂತೆ ಮಾರ್ಪಾಡಾಗತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆಲಿಸ್ ಗೊನ್ಸಾಲ್ವಿಸ್**
ಸರ್ಕಾರದ ಅಧೀನ ಕಾರ್ಯದಶಿಗಳು
ಆರ್ಥಿಕ ಇಲಾಖೆ (ಸೇವೆಗಳು–1)

ಪಿ.ಆರ್.2780

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಸಿ. ಜಿ. ಹರಿಹರ ಕುಮಾರ ದಾಸ ಕುರೂಪ, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರ ಹಿಂದಿನ ಸೇವೆಯನ್ನು ಪಿಂಚಣಿ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವ ಬಗ್ಗೆ.

**ಓದಲಾಗಿದೆ :** ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರ ಪತ್ರ ಸಂಖ್ಯೆ : ಸಿಎಸ್ ಎ 805 ಎಸ್ ಪಿಎಫ್ 2010/4512 ದಿನಾಂಕ : 29–12–2010.

**ಪ್ರಸ್ತಾವನೆ :**

ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಶ್ರೀ ಸಿ.ಜಿ. ಹರಿಹರ ಕುಮಾರ ದಾಸ ಕುರೂಪ, ಜಂಟಿ ನಿಯಂತ್ರಕರು ಇವರು ಕರ್ನಾಟಕ ಲೋಕಸೇವಾ ಆಯೋಗದಿಂದ ಗ್ರೂಪ್ ಎ ಪತ್ರಾಂಕಿತ ಅಧಿಕಾರಿಯಾಗಿ ಆಯ್ಕೆಗೊಂಡು ರಾಜ್ಯ ಲೆಕ್ಕಪತ್ರ ಇಲಾಖೆಯಲ್ಲಿ ಸಹಾಯಕ ನಿಯಂತ್ರಕರಾಗಿ ದಿನಾಂಕ : 12–07–1991 ರಂದು ಕರ್ತವ್ಯಕ್ಕೆ ಹಾಜರಾಗಿದ್ದು, ರಾಜ್ಯ ಲೆಕ್ಕಪತ್ರ ಇಲಾಖೆಗೆ ಸೇವೆಗೆ ಸೇರುವ ಮುನ್ನ ದಿನಾಂಕ : 11–07–1995 ರಿಂದ 11–07–1991 ರವರೆಗೆ ಪದವಿಪೂರ್ವ ಶಿಕ್ಷಣ ಇಲಾಖೆಯು ಸರ್ಕಾರಿ ಪದವಿ ಪೂರ್ವ ಕಾಲೇಜು, ಕುರ್ನಾಡು, ಬಂಟ್ವಾಳ ತಾಲ್ಲೂಕು ಇಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ್ದು, ಸದರಿ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ

ನಿಯಮ 224(ಬಿ) ರನ್ವಯ ಪಿಂಚಣಿ ಸೌಲಭ್ಯಗಳಿಗಾಗಿ ಅರ್ಹತಾದಾಯಕ ಸೇವೆ ಎಂದು ಪರಿಗಣಿಸುವ ಪ್ರಸಾವನೆ ಸಲ್ಲಿಸಿದ್ದಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 23 ರಾಲೆಪ 2011, ಬೆಂಗಳೂರು, ದಿನಾಂಕ: 28 ನೇ ನವೆಂಬರ್ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಶ್ರೀ ಸಿ. ಜಿ. ಹರಿಹರ ಕುಮಾರ ದಾಸ ಕುರೂಪ, ಕಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರು ರಾಜ್ಯ ಲೆಕ್ಕಪತ್ರ ಇಲಾಖೆಗೆ ಸೇರುವ ಮುನ್ನ ದಿನಾಂಕ : 11–07–1985 ರಿಂದ 11–07–1991 ರವರೆಗೆ ಪದವಿಪೂರ್ವ ಶಿಕ್ಷಣ ಇಲಾಖೆಯ ಸರ್ಕಾರಿ ಪದವಿ ಪೂರ್ವ ಕಾಲೇಜು, ಕುರ್ನಾಡು, ಬಂಟ್ವಾಳ ತಾಲ್ಲೂಕು ಇಲ್ಲಿ ಉಪನ್ಯಾಸಕರಾಗಿ ಸಲ್ಲಿಸಿರುವ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 224(ಬಿ) ರನ್ವಯ ಪಿಂಚಣಿ ಸೌಲಭ್ಯಗಳಿಗೆ ಮಾತ್ರ ಅರ್ಹತಾದಾಯಕ ಸೇವೆ ಎಂದು ಪರಿಗಣಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

ಪಿ.ಆರ್.2781

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುವ ನ್ಯಾಯಾಂಗ ಅಧಿಕಾರಿಗಳಿಗೆ ಶೇಕಡ 10 ರಷ್ಟು ಪ್ರಭಾರ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಲಾ 124 ಎಲ್.ಎ.ಸಿ. 1997, ದಿನಾಂಕ : 25–04–2005.
2. ಕಡತ ಸಂಖ್ಯೆ : ಲಾ 155 ಎಲ್.ಎ.ಸಿ. 2010.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ದಿನಾಂಕ : 25–04–2005ರ ಆದೇಶದಲ್ಲಿ ನ್ಯಾಯಾಂಗ ಇಲಾಖೆಗೆ ಸೇರಿದ ಅಧಿಕಾರಿಗಳಿಗೆ (ಜುಡಿಷಿಯಲ್ ಆಫೀಸರ್ಸ್) ಗಳಿಗೆ ಅವರು ಇನ್ನೊಂದು ನ್ಯಾಯಾಂಗ ಹುದ್ದೆಯ ಅಧಿಕ ಪ್ರಭಾರ ಹೊಂದಿದ ಹುದ್ದೆಯ ವೇತನ ಶ್ರೇಣಿಯ ಕನಿಷ್ಠದ ಶೇಕಡ 10 ರಷ್ಟನ್ನು ಮಂಜೂರು ಮಾಡಲು ಅವಕಾಶ ಕಲ್ಪಿಸಲಾಗಿದೆ. ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ನ್ಯಾಯಾಂಗ ಸೇವೆಯಿಂದ ನಿಯೋಜನೆ ಮೇರೆಗೆ ಕಾರ್ಯ ನಿರ್ವಸುತ್ತಿರುವ ಅಧಿಕಾರಿಗಳಿಗೂ ಸಹ ನ್ಯಾಯಾಲಯೇತರ ಹುದ್ದೆಗಳ ಅಧಿಕ ಪ್ರಭಾರದಲ್ಲಿ ಕರ್ತವ್ಯ ನಿರ್ವಹಿಸಿದ ಅವಧಿಗೆ ಶೇಕಡ 10 ರಷ್ಟು ಪ್ರಭಾರ ಭತ್ಯೆಯನ್ನು ಮಂಜೂರು ಮಾಡುವಂತೆ ಮೇಲೆ (2) ರಲ್ಲಿ ಓದಲಾದ ಕಡತದಲ್ಲಿ ಕೋರಿದ್ದಾರೆ. ಇದನ್ನು ಪರಿಸೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 294 ಸಆಸೇ 2010, ಬೆಂಗಳೂರು, ದಿನಾಂಕ: 26ನೇ ನವೆಂಬರ್ 2011.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ನ್ಯಾಯಾಂಗ ಸೇವೆಯಿಂದ ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿ ನಿಯೋಜನೆ ಮೇರೆಗೆ ಕಾರ್ಯ ನಿರ್ವಹಿಸುತ್ತಿರುವ ಅಧಿಕಾರಿಗಳು ಅವರ ಹುದ್ದೆಯ ಸಮಾನಾಂತರದ ಹುದ್ದೆ ಅಥವಾ ಅವರ ಹುದ್ದೆಗಿಂತ ಮೇಲ್ಪಟ್ಟ ಹುದ್ದೆಯ ಅಧಿಕ ಪ್ರಭಾರದಲ್ಲಿ ಕರ್ತವ್ಯ ನಿರ್ವಹಿಸಿದಾಗ ಅಧಿಕ ಪ್ರಭಾರ ಹೊಂದಿದ ಹುದ್ದೆಯ ವೇತನ ಶ್ರೇಣಿಯ ಕನಿಷ್ಟ ವೇತನದ ಶೇಕಡ 10 ರಷ್ಟು ಪ್ರಭಾರ ಭತ್ಯೆಯನ್ನು ದಿನಾಂಕ : 7–5–2003 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಪಡೆಯಲು ಅರ್ಹರಿರುತ್ತಾರೆಂದು ಈ ಮೂಲಕ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ : ಆಇ 508 ಸೇ–2/2011, ದಿನಾಂಕ : 26–11–2011 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸುಇ (ಸೇವೆಗಳು–3)

ಪಿ.ಆರ್.2782

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎಸ್.ಆರ್. ಶಂಕರ್, ಸರ್ಕಾರದ ಅಧೀನ ಕಾರ್ಯದರ್ಶಿ (ನಿವೃತ್ತ) ಇವರಿಗೆ ನಿವೃತ್ತ ದಿನಾಂಕದಂದು ಖಾತೆಯಲ್ಲಿ ಜಮೆ ಇದ್ದ ಗಳಿಕೆ ರಜೆಗೆ ನಗದೀಕರಣ ಮಂಜೂರಾತಿ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 206 ಸೇಇವಿ 2007, ದಿನಾಂಕ : 09–11–2010.
2. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 206 ಸೇಇವಿ 2007, ದಿನಾಂಕ : 26–10–2011.

**ಪ್ರಸ್ತಾವನೆ :**

ಶ್ರೀ ಎಸ್.ಆರ್. ಶಂಕರ್, ಸರ್ಕಾರದ ಅಧೀನ ಕಾರ್ಯದರ್ಶಿ (ನಿವೃತ್ತ) ಇವರು ದಿನಾಂಕ : 31–12–2010 ರಂದು ವಯೋ ನಿವೃತ್ತಿ ಹೊಂದಿದ್ದು, ಇವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇದ್ದ ಮೇರೆಗೆ, ನಿವೃತ್ತಿ ಹೊಂದುವ ದಿನಾಂಕ : 31–12–2010 ಕ್ಕೆ ಇವರ ಖಾತೆಯಲ್ಲಿ ಜಮೆ ಇದ್ದ 240 ದಿನಗಳ ಗಳಿಕೆ ರಜೆಗೆ ನಗದೀಕರಣ ಮಂಜೂರು ಮಾಡಬೇಕಾಗಿರುವುದನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 118–ಎ (2) ರ ವ್ಯಾಪ್ತಿಗನುಸಾರ ಮೇಲೆ ಓದಲಾದ (1)ರ ಆದೇಶದಲ್ಲಿ ತಡೆಹಿಡಿಯಲಾಗಿತ್ತು.

ಮೇಲೆ ಓದಲಾದ (2) ರ ಆದೇಶದಲ್ಲಿ ಶ್ರೀ ಎಸ್.ಆರ್. ಶಂಕರ್, ಅಧೀನ ಕಾರ್ಯದರ್ಶಿ (ನಿವೃತ್ತ) ಇವರ ವಿರುದ್ಧ ಮಾಡಲಾದ ಆರೋಪಗಳು ಸಾಭೀತಾಗದೆ ಇರುವುದರಿಂದ ಇವರನ್ನು ಆರೋಪ ಮುಕ್ತರನ್ನಾಗಿಸಿ ಆದೇಶಿಸಲಾಗಿದೆ. ಆದ್ದರಿಂದ ಇವರಿಗೆ ತಡೆಹಿಡಿಯಲಾಗಿರುವ 240 ದಿನಗಳ ಗಳಿಕೆ ರಜೆಗೆ ನಗದೀಕರಣವನ್ನು ಮಂಜೂರು ಮಾಡಬೇಕಾಗಿದ್ದು, ವಿಷಯವನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 16 ಸೇಇನಿ 2010, ಬೆಂಗಳೂರು, ದಿನಾಂಕ: 29 ನೇ ನವೆಂಬರ್ 2011.**

ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 206 ಸೇಇನಿ 2007 ದಿನಾಂಕ : 26-10-2011 ರಲ್ಲಿ ಶ್ರೀ ಎಸ್. ಆರ್. ಶಂಕರ್, ಅಧೀನ ಕಾರ್ಯದರ್ಶಿ (ನಿವೃತ್ತ) ಅವರ ವಿರುದ್ಧ ಮಾಡಲಾದ ಆರೋಪಗಳಿಂದ ಇವರನ್ನು ಮುಕ್ತರನ್ನಾಗಿಸಿರುವುದರಿಂದ ಈ ಪ್ರಕರಣ ಮಟ್ಟಿಗೆ ವಿಚಾರಣೆ ನಡೆಯದಿದ್ದಲ್ಲಿ ಯಾವ ಸೌಲಭ್ಯವನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಾಗಿರುವುದರಿಂದ ಇವರು ವಯೋನಿವೃತ್ತಿ ಹೊಂದಿದ ದಿನಾಂಕ : 31-12-2010 ಕ್ಕೆ ಇವರ ಖಾತೆಯಲ್ಲಿ ಜಮೆ ಇದ್ದ 240 ದಿನಗಳ (ಇನ್ನೂರ ನಲವತ್ತು ದಿನಗಳು) ಗಳಿಕೆ ರಜೆಗೆ ಕರ್ನಾಟಕ ನಾಗರೀಕ ಸೇವಾ ನಿಯಾಮಾವಳಿ ನಿಯಮ 118-ಎ (1) (ಎ) ಹಾಗೂ ಉಪನಿಯಮ (2) ರ ವ್ಯಾಪ್ತಿಗನುಸಾರ ನಗದೀಕರಣವನ್ನು ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವೆಗಳು-3)

ಪಿ.ಆರ್.2783

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಸಿ. ಚಂದ್ರಯ್ಯ, ನಿವೃತ್ತ ಉಪ ಕಾರ್ಯದರ್ಶಿ, ಇವರ ವಿರುದ್ಧ ಇಲಾಖಾ ವಿಚಾರಣೆ-ಮಂಡನಾಧಿಕಾರಿ ನೇಮಕ-ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : "ಸಿಆಸುಇ 19 ಸೇಇವಿ 2010, ದಿನಾಂಕ : 01-08-2011.
2. ಶ್ರೀ ಅಬ್ದುಲ್ ರೆಹೆಮಾನ್, ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಆಸು-ರಾವಿವೇ-1) ಇವರ ಮನವಿ, ದಿನಾಂಕ : 09-08-2011.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ದಿನಾಂಕ : 1-8-2011 ರ ಸರ್ಕಾರಿ ಆದೇಶದಲ್ಲಿ ಶ್ರೀ ಸಿ. ಚಂದ್ರಯ್ಯ, ನಿವೃತ್ತ ಉಪ ಕಾರ್ಯದರ್ಶಿ, ಇವರ ವಿರುದ್ಧ ಇಲಾಖಾ ವಿಚಾರಣೆಯಲ್ಲಿ ಶೀ ಎಂ. ಜಿ. ಹಿರೇಮಠ್, ನಿವೃತ್ತ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯಾಗಿ ಹಾಗೂ ಶ್ರೀ ಅಬ್ದುಲ್ ರೆಹೆಮಾನ್, ಸರ್ಕಾರದ ಅಧೀನ ಕಾರ್ಯದರ್ಶಿ, ಸಿಅಸುಇ (ಆಸು) ಇವರನ್ನು ಮಂಡನಾಧಿಕಾರಿಯನ್ನಾಗಿಯೂ ನೇಮಕ ಮಾಡಲಾಗಿತ್ತು. ಶ್ರೀ ಅಬ್ದುಲ್ ರೆಹೆಮಾನ್, ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಆಸು-ರಾವಿವೇ-1) ಇಲ್ಲಿಗೆ ಆಂತರಿಕ ಬದಲಾವಣೆಗೊಂಡಿರುವುದರಿಂದ ಸದರಿ ಅಧಿಕಾರಿಯು ಮೇಲೆ (2) ರಲ್ಲಿ ಓದಲಾದ ದಿನಾಂಕ : 9-8-2011ರ ಮನವಿಯಲ್ಲಿ ತಾವು ಸ್ವಾತಂತ್ರ್ಯ ಯೋಧರ ಗೌರವ ಧನಕ್ಕೆ ಸಂಬಂಧಪಟ್ಟ ಹಲವಾರು ರಿಟ್ ಅರ್ಜಿ/ನ್ಯಾಯಾಲಯ ಪ್ರಕರಣಗಳಿಗೆ ಕಂಡಿಕೆ ವಾರು ಷರಾ ತಯಾರಿಕೆ ಜೊತೆಗೆ ಧಾರವಾಡ ಮತ್ತು ಗುಲ್ಬರ್ಗಾ ಸಂಚಾರಿ ಪೀಠಗಳಿಗೆ ಖುದ್ದಾಗಿ ಹಾಜರಾಗಬೇಕಾಗಿರುವುದರಿಂದ ತಮ್ಮ ಬದಲಾಗಿ ಬೇರೆ ಮಂಡನಾಧಿಕಾರಿಯನ್ನು ನೇಮಿಸುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದೆ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 19 ಸೇಇನಿ 2010, ಬೆಂಗಳೂರು, ದಿನಾಂಕ: 3 ನೇ ನವೆಂಬರ್ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸನ್ನಿವೇಶಗಳ ಹಿನ್ನೆಲೆಯಲ್ಲಿ ದಿನಾಂಕ : 1-8-2011 ರ ಸರ್ಕಾರಿ ಆದೇಶದಲ್ಲಿ ಮಂಡನಾಧಿಕಾರಿಯನ್ನಾಗಿ ಶ್ರೀ ಅಬ್ದುಲ್ ರೆಹೆಮಾನ್, ಸರ್ಕಾರದ ಅಧೀನ ಕಾರ್ಯದರ್ಶಿ, ಇವರನ್ನು ನೇಮಿಸಿರುವುದನ್ನು ಮಾರ್ಪಡಿಸಿ ಈ ಪ್ರಕರಣದಲ್ಲಿ ಇಲಾಖಾ ವಿಚಾರಣಗಳಿಗೆ ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಆಸು-ತರಬೇತಿ) ಅವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿದೆ. ವಿಚಾರಣಾಧಿಕಾರಿಯವರನ್ನು ನೇಮಿಸಿ ಹೊರಡಿಸಿರುವ ದಿನಾಂಕ : 1-8-2011 ರ ಆದೇಶದಲ್ಲಿ ಈಗಾಗಲೇ ನಿರ್ದೇಶಿಸಿರುವಂತೆ ಎಲ್ಲ ಸಲಹೆ ಸೂಚನೆಗಳು ಮುಂದುವರೆಯುತ್ತವೆ. ಉಳಿದಂತೆ ಶ್ರೀ ಎಂ. ಜಿ. ಹಿರೇಮಠ್, ನಿವೃತ್ತ ನ್ಯಾಯಾಧೀಶರವರೇ ಈ ಪ್ರಕರಣದ ವಿಚಾರಣಾಧಿಕಾರಿಯಾಗಿ ಮುಂದುವರೆಯುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವೆಗಳು-3)

ಪಿ.ಆರ್.2784

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರದಲ್ಲಿ 'ಕರ್ನಾಟಕ ರಾಜ್ಯ ತರಬೇತಿ ನೀತಿ'ಯನ್ನು ಜಾರಿಗೆ ತರುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಆಸುಇ 87 ಇಆತ 2009, ದಿನಾಂಕ : 07-10-2011.

**ಪ್ರಸ್ತಾವನೆ :**

ಮೇಲೆ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಕಾರ್ಯ ದಕ್ಷತೆಯನ್ನು ಉತ್ತಮಗೊಳಿಸುವುದಕ್ಕಾಗಿ ಅಗತ್ಯ ತರಬೇತಿ ನೀಡುವ ಉದ್ದೇಶದಿಂದ 'ಕರ್ನಾಟಕ ರಾಜ್ಯ ತರಬೇತಿ ನೀತಿ'ಯನ್ನು ಜಾರಿಗೆ ತರಲಾಗಿದೆ.

ಸದರಿ ತರಬೇತಿ ನೀತಿಯಲ್ಲಿ, ರಾಜ್ಯ ತರಬೇತಿ ನೀತಿಯನ್ನು ಸೂಕ್ತವಾಗಿ ಜಾರಿಗೊಳಿಸಲು ಮತ್ತು ಕಾರ್ಯಸಾಧನೆಯ ಮೇಲ್ವಿಚಾರಣೆ ನಡೆಸಿ ಸೂಕ್ತ ಮಾರ್ಗದರ್ಶನ ನೀಡುವುದಕ್ಕಾಗಿ ಕರ್ನಾಟಕ ರಾಜ್ಯ ತರಬೇತಿ ಪರಿಷತ್ತು ಮತ್ತು ಉನ್ನತಾಧಿಕಾರದ ಸಮನ್ವಯ ಸಮಿತಿಯನ್ನು ರಚಿಸಲು ಹೇಳಲಾಗಿದೆ. ಅದರಂತೆ ಸಮಿತಿ ರಚಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 87 ಇಆತ 2009, ಬೆಂಗಳೂರು, ದಿನಾಂಕ: 9 ನೇ ನವೆಂಬರ್ 2011.**

ಕರ್ನಾಟಕ ಸರ್ಕಾರದಲ್ಲಿ 'ಕರ್ನಾಟಕ ರಾಜ್ಯ ತರಬೇತಿ ನೀತಿ'ಯನ್ನು ಸೂಕ್ತವಾಗಿ ಜಾರಿಗೊಳಿಸಲು ಮತ್ತು ಕಾರ್ಯಸಾಧನೆಯ ಮೇಲ್ವಿಚಾರಣೆ ನಡೆಸಲು ಕರ್ನಾಟಕ ರಾಜ್ಯ ತರಬೇತಿ ಪರಿಷತ್ತು ಮತ್ತು ಉನ್ನತಾಧಿಕಾರದ ಸಮನ್ವಯ ಸಮಿತಿಯನ್ನು ಈ ಕೆಳಗಿನಂತೆ ರಚಿಸಲಾಗಿದೆ :

**ಕರ್ನಾಟಕ ರಾಜ್ಯ ತರಬೇತಿ ಪರಿಷತ್ತು :**

| | | | |
|---|---|---|---|
| 1. | ಸರ್ಕಾರದ ಮುಖ್ಯ ಕಾರ್ಯದರ್ಶಿಗಳು | : | ಅಧ್ಯಕ್ಷರು |
| 2. | ಅಪರ ಮುಖ್ಯ ಕಾರ್ಯದರ್ಶಿಗಳು | : | ಸದಸ್ಯರು |
| 3. | ಅಪರ ಮುಖ್ಯ ಕಾರ್ಯದರ್ಶಿಗಳು ಮತ್ತು ಅಭಿವೃದ್ಧಿ ಆಯುಕ್ತರು | : | ಸದಸ್ಯರು |
| 4. | ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ | : | ಸದಸ್ಯರು |
| 5. | ಪ್ರಧಾನ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | : | ಸದಸ್ಯರು |
| 6. | ಪ್ರಧಾನ ಕಾರ್ಯದರ್ಶಿಗಳು, ಯೋಜನಾ ಇಲಾಖೆ | ; | ಸದಸ್ಯರು |
| 7. | ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ | : | ಸದಸ್ಯರು |
| 8. | ಮಹಾ ನಿರ್ದೇಶಕರು, ಆಡಳಿತ ತರಬೇತಿ ಸಂಸ್ಥೆ, ಮೈಸೂರು | : | ಸದಸ್ಯರು |
| 9. | ನಿರ್ದೇಶಕರು, ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆ ಸಂಸ್ಥೆ, ಬೆಂಗಳೂರು | : | ಸದಸ್ಯರು |
| 10. | ನಿರ್ದೇಶಕರು, ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್, ಬೆಂಗಳೂರು | : | ಸದಸ್ಯರು |
| 11. | ಅಧ್ಯಕ್ಷರು, ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಪಬ್ಲಿಕ್ ಅಡ್ಮನಿಸ್ಟ್ರೇಷನ್ | : | ಸದಸ್ಯರು |
| 12. | ಪ್ರಧಾನ ಕಾರ್ಯದರ್ಶಿಗಳು, ಸಿಆಸುಇ (ಆಡಳಿತ ಸುಧಾರಣೆ) | : | ಸದಸ್ಯ ಕಾರ್ಯದರ್ಶಿ |

**ಆಹ್ವಾನಿತರು :**

1. ಪ್ರಧಾನ ಕಾರ್ಯದರ್ಶಿಗಳು, ಗೃಹ ಇಲಾಖೆ
2. ಪ್ರಧಾನ ಕಾರ್ಯದರ್ಶಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
3. ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ
4. ಪ್ರಧಾನ ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ
5. ಪ್ರಧಾನ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ
6. ಪ್ರಧಾನ ಕಾರ್ಯದರ್ಶಿಗಳು, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ
7. ನಿರ್ದೇಶಕರು, ನ್ಯಾಷನಲ್ ಲಾ ಸ್ಕೂಲ್ ಆಫ್ ಇಂಡಿಯಾ, ಬೆಂಗಳೂರು
8. ನಿರ್ದೇಶಕರು, ಫಿಸ್ಕಲ್ ಪಾಲಿಸಿ ಇನ್ಸ್ಟಿಟ್ಯೂಟ್, ಬೆಂಗಳೂರು
9. ಅಧ್ಯಕ್ಷರು, ತರಬೇತಿ ಕಾರ್ಯಕ್ಷೇತ್ರದಲ್ಲಿ ಸಾಕಷ್ಟು ಕೊಡುಗೆಗಳನ್ನು ನೀಡಿರುವ ಯಾರನ್ನಾದರೂ ಸದಸ್ಯರನ್ನಾಗಿ ಸೇರಿಸಿಕೊಳ್ಳಬಹುದು.
10. ನಿರ್ದೇಶಕರು, ಸೆಂಟರ್ ಫಾರ್ ಗುಡ್ ಗವರ್ನೆನ್ಸ್ ಹೈದರಾಬಾದ್.

**ರಾಜ್ಯ ತರಬೇತಿ ಪರಿಷತ್ತಿನ ಕರ್ತವ್ಯಗಳು ಮತ್ತು ಜವಾಬ್ದಾರಿಗಳು :**

ಈ ಪರಿಷತ್ತು, ರಾಜ್ಯ ತರಬೇತಿ ನೀತಿಯನ್ನು ಅನುಷ್ಠಾನಗೊಳಿಸುವಲ್ಲಿ ಸರ್ಕಾರಕ್ಕೆ ಸಲಹೆ ಹಾಗೂ ಮಾರ್ಗದರ್ಶನಗಳನ್ನು ನೀಡುವುದು. ರಾಜ್ಯ ತರಬೇತಿಗೆ ಸಂಬಂಧಿಸಿದ ತರಬೇತಿಯ ರೂಪುರೇಷೆಗಳು; ಕಾರ್ಯಕ್ರಮಗಳನ್ನು ರೂಪಿಸುವಲ್ಲಿ ಹಾಗೂ ಅವುಗಳನ್ನು ಅನುಷ್ಠಾನಗೊಳಿಸುವಲ್ಲಿ ಸರ್ಕಾರಕ್ಕೆ ಸಲಹೆ ನೀಡುವುದು.

**ಉನ್ನತಾಧಿಕಾರದ ಸಮನ್ವಯ ಸಮಿತಿ :**

| | | |
|---|---|---|
| ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ | : | ಅಧ್ಯಕ್ಷರು |
| ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಿ.ಆಸು.ಇ. (ಆಡಳಿತ ಸುಧಾರಣೆ) | : | ಸದಸ್ಯರು |
| ಮಹಾ ನಿರ್ದೇಶಕರು, ಆಡಳಿತ ತರಬೇತಿ ಸಂಸ್ಥೆ, ಮೈಸೂರು | : | ಸದಸ್ಯರು |
| ಸರ್ಕಾರದ ಪ್ರಧಾನ ಕಾರ್ಯರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ | : | ಸದಸ್ಯರು |
| ಉಪಕಾರ್ಯದರ್ಶಿಗಳು, ಸಿ.ಆ.ಸು.ಇ. (ಆ.ಸು) | : | ಸದಸ್ಯ-ಕಾರ್ಯದರ್ಶಿಗಳು |

**ಉನ್ನತಾಧಿಕಾರದ ಸಮನ್ವಯ ಸಮಿತಿಯ ಕರ್ತವ್ಯಗಳು ಮತ್ತು ಜವಾಬ್ದಾರಿಗಳು :**

- ಉನ್ನತಾಧಿಕಾರದ ಸಮನ್ವಯ ಸಮಿತಿಯು ನೋಡಲ್ ಏಜೆನ್ಸಿಯಾಗಿ ರಾಜ್ಯ ತರಬೇತಿ ಪರಿಷತ್ತಿಗೆ ಸಹಕರಿಸುವುದು;
- ರಾಜ್ಯ ತರಬೇತಿ ನೀತಿಯ ಅನುಷ್ಠಾನಗೊಳಿಸುವಲ್ಲಿ ಮೇಲ್ವಿಚಾರಣೆ ನಡೆಸುವುದು;
- ಪ್ರತಿಯೊಂದು ಇಲಾಖೆಯು ವಾರ್ಷಿಕ ಕ್ರಿಯಾ ಯೋಜನೆಯಲ್ಲಿ ತರಬೇತಿಗೆ ಸಂಬಂಧಿಸಿದಂತೆ ರೂಪುರೇಷೆಗಳನ್ನು ರಚಿಸಿದೆಯೇ ಎಂಬುದನ್ನು ಗಮನಿಸುವುದು;

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಭಾರತಿ ಆರ್. ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್.2785

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

(ಆಸು-ತರಬೇತಿ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಯಲ್ಲಿನ ವಿಶೇಷಾಧಿಕಾರಿ (ಮೌಲ್ಯಮಾಪನ) ಹುದ್ದೆಯನ್ನು ಸರ್ಕಾರದ ಕಾರ್ಯದರ್ಶಿ ಹುದ್ದೆಗೆ ತತ್ಸಮಾನವಾದ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ಸಲಹೆಗಾರರು ಎಂದು ಮರುಪದನಾಮೀಕರಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶಸಂಖ್ಯೆ : ಸಿಆಸುಇ 283 ಸಅಸೇ 2010, ದಿನಾಂಕ : 12–07–2010.
2. ಅಧಿಸೂಚನೆ ಸಂಖ್ಯೆ : ಸಿಆಸುಇ 442 ಸಅಸೇ 2010, ದಿನಾಂಕ : 29–09–2010.
3. ಸಚಿವ ಸಂಪುಟದ ಪ್ರಕರಣ ಸಂಖ್ಯೆ : ಸಿ : 492/2011, ದಿನಾಂಕ : 28–10–2011.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ದಿನಾಂಕ : 12–07–2010ರ ಸರ್ಕಾರದ ಆದೇಶದಲ್ಲಿ ಯೋಜನಾ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಯಲ್ಲಿ ವೇತನ ಶ್ರೇಣಿ ರಹಿತ ವಿಶೇಷಾಧಿಕಾರಿ (ಮೌಲ್ಯಮಾಪನ) ಹುದ್ದೆಯನ್ನು ಸೃಜಿಸಲಾಗಿದೆ. ಮೇಲೆ (2) ರಲ್ಲಿ ಓದಲಾದ ದಿನಾಂಕ : 29–09–2010ರ ಅಧಿಸೂಚನೆಯಲ್ಲಿ ಪ್ರೊ॥ ಎಸ್. ಮಾದೇಶ್ವರನ್, ಪ್ರಾಧ್ಯಾಪಕರು, ಸೆಂಟರ್ ಫಾರ್ ಎಕನಾಮಿಕ್ ಸ್ಟಡೀಸ್ ಅಂಡ್ ಪಾಲಿಸಿ, ಇನ್ಸಿಸ್ಟಿಟ್ಯೂಟ್ ಫಾರ್ ಸೋಷಿಯಲ್ ಅಂಡ್ ಎಕನಾಮಿಕ್ ಚೇಂಜ್, ಬೆಂಗಳೂರು ಇವರನ್ನು ಯೋಜನಾ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಯಲ್ಲಿ ಸೃಜಿಸಲಾದ ವೇತನ ಶ್ರೇಣಿ ರಹಿತ ವಿಶೇಷಾಧಿಕಾರಿ (ಮೌಲ್ಯಮಾಪನ) ಹುದ್ದೆಗೆ ನೇಮಿಸಲಾಗಿದೆ.

ಪ್ರೊ॥ ಎಸ್. ಮಾದೇಶ್ವರನ್, ಇವರು ನಿರ್ವಹಿಸುವ ಕಾರ್ಯವು ಅಂತರ–ಇಲಾಖೆ ಸ್ವರೂಪದ್ದಾಗಿದ್ದು, ವಾರ್ಷಿಕ ಯೋಜನೆ, ಪಂಚವಾರ್ಷಿಕ ಯೋಜನೆ, ಆರ್ಥಿಕ ಸಮೀಕ್ಷೆಯ ಮರುವಿನ್ಯಾಸ, ಮಾನವ ಅಭಿವೃದ್ಧಿ ಕೈಪಿಡಿ/ವರದಿಗಳನ್ನು ತಯಾರಿಸುವಿಕೆಯಲ್ಲಿ ಮತ್ತು ರಾಜ್ಯ ಸಾಂಖ್ಯಿಕ ಬಲವರ್ಧನೆ ಕಾರ್ಯಕ್ರಮ ಹಾಗೂ ಪ್ರಾದೇಶಿಕ ಅಸಮಾನತೆಗಳನ್ನು ನಿರ್ಮೂಲನೆ ಮಾಡುವಲ್ಲಿ ನೀತಿ ನಿರೂಪಣೆ ಇತ್ಯಾದಿಗಳಲ್ಲಿ ಇವರು ಸಹಕಾರ ನೀಡುತ್ತಿದ್ದು, ಈ ಎಲ್ಲಾ ಕಾರ್ಯಗಳನ್ನು ಪರಿಣಾಮಗಾರಿಯಾಗಿ ನಿರ್ವಹಿಸಲು ಹಾಗೂ ಆಡಳಿತ ಇಲಾಖೆಗಳ ಕಾರ್ಯದರ್ಶಿಗಳು ಹಾಗೂ ಪ್ರಧಾನ ಕಾರ್ಯದರ್ಶಿಗಳೊಂದಿಗೆ ಉತ್ತಮವಾಗಿ ಸಂಭಾಷಿಸುವಲ್ಲಿ ಅನುವು ಮಾಡಿಕೊಡುವ ನಿಟ್ಟಿನಲ್ಲಿ ಪ್ರೊ॥ ಎಸ್. ಮಾದೇಶ್ವರನ್, ಇವರನ್ನು ಸರ್ಕಾರದ ಸಲಹೆಗಾರರೆಂದು ಮರುಪದನಾಮೀಕರಿಸಿ ಸರ್ಕಾರದ ಕಾರ್ಯದರ್ಶಿ ಹುದ್ದೆಯ ದರ್ಜೆ ಮತ್ತು ಸವಲತ್ತುಗಳನ್ನು ನೀಡುವ ಪ್ರಸ್ತಾವನೆಗೆ ಸಚಿವ ಸಂಪುಟವು ಮೇಲೆ (2) ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಅನುಮೋದನೆ ನೀಡಿದೆ. ಇದನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 576 ಸಅಸೇ 2011, ಬೆಂಗಳೂರು, ದಿನಾಂಕ: 3 ನೇ ಡಿಸೆಂಬರ್ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 283 ಸಆಸೇ 2010, ದಿನಾಂಕ : 12–7–2010 ರನ್ವಯ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಯಲ್ಲಿ ತಾತ್ಕಾಲಿಕವಾಗಿ ಎರಡು ವರ್ಷಗಳ ಅವಧಿಗೆ ಸೃಜಿಸಲಾಗಿರುವ ವೇತನ ಶ್ರೇಣಿ ರಹಿತ ವಿಶೇಷಾಧಿಕಾರಿ (ಮೌಲ್ಯಮಾಪನ) ಹುದ್ದೆಯಲ್ಲಿ ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡಿರುವ ಪ್ರೊ॥ ಎಸ್. ಮಾದೇಶ್ವರನ್, ರವರ ಗುತ್ತಿಗೆ ಆಧಾರದ ನೇಮಕಾತಿ ಅವಧಿ ಮುಗಿಯುವವರೆಗೆ ಸದರಿ ವಿಶೇಷಾಧಿಕಾರಿ (ಮೌಲ್ಯಮಾಪನ) ಹುದ್ದೆಯನ್ನು ಸರ್ಕಾರದ ಕಾರ್ಯದರ್ಶಿ ಹುದ್ದೆಗೆ ತತ್ಸಮಾನವಾದ ಯೋಜನೆ, ಕಾರ್ಯಕ್ರಮ ಸದರಿ ಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ಸಲಹೆಗಾರರು ಎಂದು ಮರುಪದನಾಮೀಕಜರಿಸಿ ಸರ್ಕಾರದ ಕಾರ್ಯದರ್ಶಿ ಹುದ್ದೆಗೆ ಲಭ್ಯವಿರುವ ಸವಲತ್ತುಗಳನ್ನು ಪಡೆಯಲು ಅರ್ಹರಿರುತ್ತಾರೆಂದು ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವೆಗಳು–3)

ಪಿ.ಆರ್.2786

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಟಿ.ಪಿ. ಶಿವಕುಮಾರ, ಪ್ರೊಬೆಷನರಿ ಡಿವೈ.ಎಸ್.ಪಿ., ಅರಸೀಕೆರೆ ಉಪ ವಿಭಾಗ ರವರ ವಿರುದ್ಧದ ಆರೋಪಗಳ ಬಗ್ಗೆ ಅಂತಿಮ ಆದೇಶ ಹೊರಡಿಸುವ ಕುರಿತು.

**ಓದಲಾಗಿದೆ:** 1) ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: ಸಿಬಿ (5)/67/08–09 ದಿನಾಂಕ: 13–01–2009, 29–01–2009 ಮತ್ತು 20–03–2009.
2) ಸರ್ಕಾರದ ಆದೇಶ ಸಂಖ್ಯೆ: ಒಇ 58 ಪೊಸಿಪ 2009 ದಿನಾಂಕ: 21–03–2009.
3) ಪೊಲೀಸ್ ಮಹಾ ನಿರೀಕ್ಷಕರು, ಪೊಲೀಸ್ ಗಣಕ ವಿಭಾಗ, ಬೆಂಗಳೂರು ರವರ ಪತ್ರ ಸಂಖ್ಯೆ: 14/ಇ/ವಿ/ ಐಜಿಪಿ/ಪೊಗವಿ/2009 ದಿನಾಂಕ:22–06–2011 ಮತ್ತು 13–09–2011

**ಪ್ರಸ್ತಾವನೆ:**

ಶ್ರೀ ಟಿ.ಪಿ. ಶಿವಕುಮಾರ್, ಡಿವೈ.ಎಸ್.ಪಿ. ಅರಸೀಕೆರೆ ಉಪ ವಿಭಾಗ, ಹಾಸನ ಜಿಲ್ಲೆ ಇವರು ಅರಸೀಕೆರೆ ಉಪ ವಿಭಾಗದಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡಂದಿನಿಂದಲೂ ಅಕ್ರಮ ಹಣ ಸಂಪಾದನೆಯಲ್ಲಿ ತೊಡಗಿ ಸಾರ್ವಜನಿಕರಿಗೆ ಕಿರುಕುಳ ನೀಡಿರುವುದು, ಗಣ್ಯ ವ್ಯಕ್ತಿಗಳ ಮೇಲೆ ಇಲ್ಲಸಲ್ಲದ ಆರೋಪಗಳನ್ನು ಹೊರಿಸಿ ಪ್ರಕರಣಗಳನ್ನು ದಾಖಲಿಸಿರುವುದು, ಮರಳು ಲಾರಿ ಸಾಗಾಣಿಕೆದಾರರಿಂದ ಅಕ್ರಮ ಸಂಭಾವನೆಯನ್ನು ಪಡೆಯುತ್ತಿರುವುದು ಇತ್ಯಾದಿ ಆರೋಪಗಳ ಮೇಲೆ ಎಸ್.ಪಿ. ಹಾಸನ ಮತ್ತು ಅಡಿಷನಲ್ ಎಸ್.ಪಿ. ಹಾಸನ ಜಿಲ್ಲೆ ಇವರ ಪೂರ್ವಭಾವಿ ವಿಚಾರಣಾ ವರದಿಯಿಂದ ಮೇಲ್ನೋಟಕ್ಕೆ ಸಾಬೀತಾಗಿರುವುದರಿದ ಶ್ರೀ ಟಿ.ಪಿ. ಶಿವಕುಮಾರ್ ರವರನ್ನು ಅಮಾನತ್ತುಗೊಳಿಸಿದ ನಂತರ ಅಮಾನತ್ತು ಆದೇಶವನ್ನು ಸ್ವೀಕರಿಸದೇ 13–01–2009ರ ಸಂಜೆಯಿಂದ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುವುದು ಅಲ್ಲದೇ ಅವರಿಗೆ ನೀಡಲಾದ ಸರ್ಕಾರಿ ರಿವಾಲ್ವರ್ ಮತ್ತು

ವಾಕಿ-ಟಾಕಿ ಗಳನ್ನು ಹಿಂದಿರುಗಿಸದೇ ಅರಸೀಕೆರೆ ಉಪ ವಿಭಾಗದ ಕಛೇರಿಯ ಪ್ರಭಾರವನ್ನು ಸಹ ವಹಿಸಿಕೊಡದೆ ಮೇಲಾಧಿಕಾರಿಗಳ ಅನುಮತಿ ಪಡೆಯದೇ ಕೇಂದ್ರ ಸ್ಥಾನದಿಂದ ನಾಪತ್ತೆಯಾಗಿರುವುದಾಗಿ ಎಸ್.ಪಿ., ಹಾಸನ ರವರು ವರದಿ ಮಾಡಿರುವುದಾಗಿಯೂ ಮೇಲ್ಕಂಡ ಆಪಾದನೆಗಳ ಅನ್ವಯ ಪೊಲೀಸ್ ಅಧಿಕಾರಿಗೆ ತಕ್ಕದ್ದಲ್ಲದ ರೀತಿಯಲ್ಲಿ ಕರ್ತವ್ಯ ನಿರ್ವಹಿಸಿರುವುದು ಅಲ್ಲದೆ ದಿನಾಂಕ 13-01-2009ರ ಸಾಯಂಕಾಲದಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿ ಕೇಂದ್ರ ಸ್ಥಾನದಿಂದ ನಾಪತ್ತೆಯಾಗಿರುವುದರಿಂದ ಶ್ರೀ ಟಿ.ಪಿ. ಶಿವಕುಮಾರ್, ಪ್ರೊಬೇಷನರಿ ಡಿವೈ.ಎಸ್.ಪಿ. ರವರನ್ನು ಕೆ.ಸಿ.ಎಸ್. (ಪ್ರೊಬೇಷನರಿ) ನಿಯಮಗಳು 1977ರ ನಿಯಮ 6ರಡಿಯಲ್ಲಿ ಸೇವೆಯಿಂದ ಬಿಡುಗಡೆಗೊಳಿಸಲು ಪೊಲೀಸ್ ಮಹಾ ನಿರೀಕ್ಷಕರು ಮೇಲೆ (1)ರಲ್ಲಿ ಪ್ರಸ್ತಾವನೆಯಲ್ಲಿ ಕೋರಿರುತ್ತಾರೆ.

ಡಿಜಿ ಮತ್ತು ಐಜಿಪಿ ರವರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಕೆ.ಸಿ.ಎಸ್. (Probation) ನಿಯಮಗಳು, 1977ರ ನಿಯಮ-7 ಈ ಕೆಳಕಂಡಂತೆ ಓದುತ್ತದೆ:-

"7. Termination for misconduct.- No order terminating the services of a probationer, whether during or at the end of the period of probation for any misconduct, shall be passed expect in accordance with the Karnataka Civil Services (Classification, Control and Appeal) Rules, 1957."

ಈ ಹಿನ್ನೆಲೆಯಲ್ಲಿ ಕೆ.ಸಿ.ಎಸ್. (ಡಿ.ಪಿ.) ನಿಯಮಗಳು 1965ರ ನಿಯಮ 6ರಡಿಯಲ್ಲಿ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ IG (PCW) SCRB ರವರನ್ನು ವಿಚಾರಣಾಧಿಕಾರಿಯನ್ನು ನೇಮಿಸಿ ಆದೇಶಿಸಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ಪತ್ರಗಳನ್ವಯ ವಿಚಾರಣಾಧಿಕಾರಿಗಳು ಅಂತಿಮ ವರದಿ ಸಲ್ಲಿಸಿರುತ್ತಾರೆ. ಇಲಾಖಾ ವಿಚಾರಣಾಧಿಕಾರಿಗಳು ಈ ಪ್ರಕರಣದಲ್ಲಿ 11 ಅಭಿಯೋಗ ಸಾಕ್ಷಿಗಳು, 17 ಅಭಿಯೋಗ ದಾಖಲಾತಿಗಳನ್ನು ಪರಿಶೀಲಿಸಿರುತ್ತಾರೆ. ಈ ಎಲ್ಲಾ ದಾಖಲಾತಿಗಳನ್ನು / ಸಾಕ್ಷ್ಯಾಧಾರಗಳನ್ನು ಪರಿಶೀಲಿಸಿದ ಇಲಾಖಾ ವಿಚಾರಣಾಧಿಕಾರಿಗಳು ಇವರ ವಿರುದ್ಧ ಹೊರಿಸಿದ 5 ದೋಷಾರೋಪಗಳಲ್ಲಿ ಯಾವುದೇ ಆರೋಪ ದೃಢಪಟ್ಟಿರುವುದಿಲ್ಲವೆಂದು ಅಭಿಪ್ರಾಯಕ್ಕೆ ಬಂದಿರುತ್ತಾರೆ.

ಇಲಾಖಾ ವಿಚಾರಣೆ ವರದಿಯಿಂದ ಕಂಡು ಬರುವ ಪ್ರಮುಖ ಅಂಶವೆಂದರೆ ಆರೋಪಿತ ಪೊಲೀಸ್ ಅಧಿಕಾರಿಯ ವಿರುದ್ಧ ಲಿಖಿತ ದೂರುಗಳನ್ನು ನೀಡಿದ ಸಾಕ್ಷಿಗಳು ಇಲಾಖಾ ವಿಚಾರಣೆಯ ಸಂದರ್ಭದಲ್ಲಿ ಈ ದೂರುಗಳನ್ನು ತಪ್ಪು ಗ್ರಹಿಕೆಯಿಂದ ನೀಡಲಾಗಿತ್ತೆಂದು, ಇಲಾಖಾ ವಿಚಾರಣೆಯಲ್ಲಿ ತಮ್ಮ ಸಾಕ್ಷಿಗಳನ್ನು ಯಾವುದೇ ಒತ್ತಡಕ್ಕೆ ಒಳಗಾಗದೇ ನೀಡಿರುವುದಾಗಿ ತಿಳಿಸಲಾಗಿದೆ. ಇವರ ವಿರುದ್ಧದ ಆರೋಪಣೆಯಲ್ಲಿ ಡಿಜಿ ಮತ್ತು ಐಜಿಪಿ ರವರ ಕಛೇರಿಯಿಂದ ಅಮಾನತ್ತುಪಡಿಸಿದ ಬಳಿಕ ತಮಗೆ ನೀಡಲಾಗಿದ್ದ ಸರ್ಕಾರಿ ರಿವಾಲ್ವರ್, ವಾಕಿ-ಟಾಕಿಗಳನ್ನು ಹಿಂದಿರುಗಿಸದೇ, ಮೇಲಾಧಿಕಾರಿಗಳ ಅನುಮತಿಯನ್ನು ಪಡೆಯದೇ ಕೇಂದ್ರ ಸ್ಥಾನದಿಂದ ನಾಪತ್ತೆಯಾಗುವ ಮೂಲಕ ಅಧಿಕಾರ ದುರುಪಯೋಗಪಡಿಸಿಕೊಂಡು ಕರ್ತವ್ಯದಲ್ಲಿ ಕರ್ತವ್ಯಚ್ಯುತಿ, ಬೇಜವಾಬ್ದಾರಿತನ ಪ್ರದರ್ಶಿಸಿರುವ ಆರೋಪದ ಬಗ್ಗೆ ವಿಚಾರಣಾಧಿಕಾರಿಯವರು ಅವರು ಅಮಾನತ್ತಿನಲ್ಲಿಟ್ಟಲ್ಲಿ ಅವರಿಗೆ ಕೊಟ್ಟಂತಹ ಸಮವಸ್ತ್ರದ ಅಂಗವಾಗಿರುವ ರಿವಾಲ್ವರ್, ವಾಕಿ-ಟಾಕಿ ಮುಂತಾದವುಗಳನ್ನು ಅವರು ಸೇವೆಯಲ್ಲಿರುವ ಕಾರಣ ಅದನ್ನು ಇಟ್ಟುಕೊಳ್ಳಲು ಅವರಿಗೆ ಹಕ್ಕು ಇರುತ್ತದೆ. ಆದರೆ ಅವುಗಳನ್ನು ಅಮಾನತ್ತಿನ ಅವಧಿಯಲ್ಲಿ ಧರಿಸಿಕೊಳ್ಳುವುದನ್ನು ಮಾತ್ರ ತಡೆಹಿಡಿಯಲಾಗಿದೆ. ಈ ಕ್ರಮವನ್ನು ಕರ್ನಾಟಕ ಕಾಯ್ದೆಯ ಸೆಕ್ಷನ್ 29 ರಲ್ಲಿ ತಿಳಿಸಲಾಗಿದ್ದು ಆಪಾದಿತ ಪೊಲೀಸ್ ಅಧಿಕಾರಿಯವರ ವಿರುದ್ಧ ಯಾವುದೇ ಆರೋಪ ದೃಢಪಟ್ಟಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ದೋಷಾರೋಪಣೆಯಲ್ಲಿ ಮೇಲಧಿಕಾರಿಗಳ ಅನುಮತಿಯನ್ನು ಪಡೆಯದೇ ಕೇಂದ್ರ ಸ್ಥಾನದಿಂದ ನಾಪತ್ತೆಯಾಗಿರುವ ಆರೋಪದ ಬಗ್ಗೆ ನಿರ್ದಿಷ್ಟವಾದ ಚರ್ಚೆಗಳಿರುವುದಿಲ್ಲ. ಆದರೆ ತಮ್ಮ ನಿರ್ಣಯದಲ್ಲಿ ಆಪಾದಿತ ಪೊಲೀಸ್ ಅಧಿಕಾರಿಯವರ ವಿರುದ್ಧ ನಡೆಸಲಾದ ಇಲಾಖಾ ವಿಚಾರಣೆಯಲ್ಲಿ ಅವರ ವಿರುದ್ಧ ಮುಖ್ಯವಾದ ಆರೋಪಗಳು ನಿರಾಧಾರದಿಂದ ಕೂಡಿದ್ದು, ಯಾವುದೇ ಆರೋಪವು ದೃಢಪಟ್ಟಿರುವುದಿಲ್ಲ ಎಂಬ ಅಭಿಪ್ರಾಯಕ್ಕೆ ಬಂದಿರುತ್ತಾರೆ. ಮೇಲ್ಕಂಡ ಹಿನ್ನೆಲೆಯಲ್ಲಿ ವಿಚಾರಣಾಧಿಕಾರಿಗಳ ವರದಿಯನ್ನು ಪರಿಶೀಲಿಸಿ ಅವರ ಅಂತಿಮ ವರದಿಯನ್ನು ಅಂಗೀಕರಿಸಿ, ಆರೋಪಿತ ಅಧಿಕಾರಿಯನ್ನು ದೋಷಮುಕ್ತಗೊಳಿಸಲು ತೀರ್ಮಾನಿಸಿದೆ. ಅದರಂತೆ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 58 ಪೊಸಿಅ 2009 ಬೆಂಗಳೂರು, ದಿನಾಂಕ: 29-11-2011**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಶ್ರೀ ಟಿ.ಪಿ ಶಿವಕುಮಾರ, ಡಿವೈ.ಎಸ್.ಪಿ., ಅರಸೀಕೆರೆ ಉಪ ವಿಭಾಗ, ಹಾಲಿ ಗುಪ್ತವಾರ್ತೆ, ಬೆಂಗಳೂರು ರವರ ವಿರುದ್ಧ ಆರೋಪಗಳು ವಿಚಾರಣೆಯಲ್ಲಿ ದೃಢಪಟ್ಟಿರದ ಹಿನ್ನೆಲೆಯಲ್ಲಿ ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿ ಇವರನ್ನು ಆರೋಪಗಳಿಂದ ದೋಷಮುಕ್ತಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಪಿ.ಆರ್. ನಂ. 2790

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ** : ಹುಬ್ಬಳ್ಳಿ ವಿದ್ಯಾನಗರ ಪೊಲೀಸ್ ಠಾಣೆಯ ಕಟ್ಟಡ ಹಾಗೂ ಅಧಿಕಾರಿ ಮತ್ತು ಸಿಬ್ಬಂದಿಯವರುಗಳ ವಸತಿಗೃಹ ನಿರ್ಮಾಣಕ್ಕಾಗಿ ಹುಬ್ಬಳ್ಳಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯವರಿಂದ 20.66 ಗುಂಟೆ ಜಮೀನನ್ನು ಖರೀದಿಸಲು ರೂ. 13,49,224/- ಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂಖ್ಯೆ: ಬಿ5ಸಿ/2/2008-09, ದಿನಾಂಕ: 04/10/2011.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 04/10/2011ರ ಪತ್ರದಲ್ಲಿ ಮಹಾ ನಿರ್ದೇಶಕರು ಆರಕ್ಷಕ ಮಹಾನಿರೀಕ್ಷಕರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಹುಬ್ಬಳ್ಳಿ ವಿದ್ಯಾನಗರ ಪೊಲೀಸ್ ಠಾಣೆ ಕಟ್ಟಡ ಹಾಗೂ ಪೊಲೀಸ್ ಅಧಿಕಾರಿ/ ಸಿಬ್ಬಂದಿಗಳ ವಸತಿಗೃಹ ನಿರ್ಮಾಣಕ್ಕಾಗಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಹುಬ್ಬಳ್ಳಿ ಇವರಿಂದ 20.66 ಗುಂಟೆ ಜಮೀನನ್ನು ಖರೀದಿಸಲು ರೂ. 13,49,924/- ಗಳನ್ನು ಬಿಡುಗಡೆ ಮಾಡುವಂತೆ

ಕೋರಿರುತ್ತಾರೆ. 2011–12ನೇ ಸಾಲಿನ ಲೆಕ್ಕ ಶೀರ್ಷಿಕೆ 2055–00–800–0–01–132 ಬಂಡವಾಳ ವೆಚ್ಚಗಳು ಇದರಡಿಯಲ್ಲಿ ಒದಗಿಸಿದ ಅನುದಾನ ರೂ. 400.00 ಲಕ್ಷಗಳನ್ನು ಸರ್ಕಾರದ ಆದೇಶದನ್ವಯ ನಾಗರಬಾವಿ 2ನೇ ಹಂತದ 10ನೇ ಬ್ಲಾಕ್‌ನಲ್ಲಿ ಪೊಲೀಸ್ ಇಲಾಖೆಗೆ ಬಿಡಿಎ ರವರಿಂದ ಹಂಚಿಕೆಯಾಗಿರುವ ಸಿ.ಎ. ನಿವೇಶನ ಸಂಖ್ಯೆ: 6/10ಕ್ಕೆ ಪಾವತಿಸಿರುವುದರಿಂದ ಸದರಿ ಲೆಕ್ಕ ಶೀರ್ಷಿಕೆಯಡಿ ಯಾವುದೇ ಅನುದಾನ ಲಭ್ಯವಿರುವುದಿಲ್ಲ. ಅಲ್ಲದೇ ನಿವೇಶನದ ಮಾರುಕಟ್ಟೆಯ ಬೆಲೆಯು ದಿನದಿಂದ ದಿನಕ್ಕೆ ಹೆಚ್ಚಾಗುತ್ತಿರುತ್ತದೆ. ಆದ್ದರಿಂದ ಈ ಪ್ರಸ್ತಾವನೆಯ ವೆಚ್ಚವನ್ನು ಭರಿಸಲು ಸದರಿ ಲೆಕ್ಕ ಶಿರ್ಷಿಕೆಯಡಿಯಲ್ಲಿ ರೂ. 13,49,924/– ಗಳ ಹೆಚ್ಚುವರಿ ಅನುದಾನ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರುರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 60 ಪಿಬಿಎಲ್ 2011 ಬೆಂಗಳೂರು, ದಿನಾಂಕ: 03–12–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಹುಬ್ಬಳ್ಳಿ ವಿದ್ಯಾನಗರ ಪೊಲೀಸ್ ಠಾಣೆಯ ಕಟ್ಟಡ ಮತ್ತು ಅಧಿಕಾರಿ/ಸಿಬ್ಬಂದಿಯವರುಗಳಿಗೆ ವಸತಿ ಗೃಹ ನಿರ್ಮಾಣಕ್ಕಾಗಿ ಹುಬ್ಬಳ್ಳಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯಿಂದ 20.66 ಗುಂಟೆ ಜಮೀನನ್ನು ರೂ.13,49,924/–ಗಳಲ್ಲಿ (ಹದಿಮೂರು ಲಕ್ಷ ನಲವತ್ತೊಂಬತ್ತು ಸಾವಿರದ ಒಂಬೈನೂರ ಇಪ್ಪತ್ತನಾಲ್ಕು ರೂಪಾಯಿಗಳು ಮಾತ್ರ) ಖರೀದಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ವೆಚ್ಚವನ್ನು 2011–12ನೇ ಸಾಲಿನ ಲೆಕ್ಕ ಶೀರ್ಷಿಕೆ 2055–00–800–0–01–132 ಬಂಡವಾಳ ವೆಚ್ಚಗಳ ಪೂರಕ ಅಂದಾಜು–2ರಲ್ಲಿ ಒದಗಿಸಲಾಗಿರುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 314 ವೆಚ್ಚ–11/2011 ದಿನಾಂಕ:23/11/2011ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ರಾಜಮ್ಮ**

ಪಿ.ಆರ್. ನಂ. 2791

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ, (ಪೊಲೀಸ್ ವೆಚ್ಚ)

## ಒಳಾಡಳಿತ ಸಚಿವಾಲಯ

**ವಿಷಯ** : ಬೆಂಗಳೂರು ನಗರದಲ್ಲಿ 2000–01ನೇ ಸಾಲಿನಲ್ಲಿ 756 ಸಂಖ್ಯೆಯ ಪೊಲೀಸ್ ಪೇದೆಗಳ ನೇಮಕಾತಿಯಲ್ಲಿನ ಅವ್ಯವಹಾರದ ಬಗ್ಗೆ.

**ಓದಲಾಗಿದೆ:**

1. ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: ಸಿಬಿ (2)84/2003–04 ದಿನಾಂಕ: 13–10–2008, 04–02–2010 ಮತ್ತು 24–09–2010.
2. ಸರ್ಕಾರದ ಪತ್ರ ಸಂಖ್ಯೆ: ಒಇ 44 ಪೊಸಿಪ 2009 ದಿನಾಂಕ: 08–02–2010 ಲಿಪಿಕ ನೌಕರರಿಗೆ ದೋಷಾರೋಪಣಾ ಪಟ್ಟಿ ಜಾರಿ
3. ಪತ್ರ ಸಂಖ್ಯೆ: ಸಿ.ಆ.ಸು.ಇ. 40 ಎಸ್‌ಪಿಎಸ್ 2009 ದಿನಾಂಕ: 05–04–2010, 12–07–2011 ಮತ್ತು 08–08–2011
4. ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: ಸಿಬಿ(5)37/08–09 ದಿನಾಂಕ: 13–07–2010, 24–09–2010, 16–11–2010, 18–02–2011 ಮತ್ತು 20–04–2011

**ಪ್ರಸ್ತಾವನೆ:**

ಬೆಂಗಳೂರು ನಗರದಲ್ಲಿ 2000–2001ನೇ ಸಾಲಿನಲ್ಲಿ 756 ಸಿವಿಲ್ ಪೊಲೀಸ್ ಪೇದೆಗಳ ನೇಮಕಾತಿ ಪ್ರಕ್ರಿಯೆಯಲ್ಲಿ ಕರ್ತವ್ಯ ಲೋಪವೆಸಗಿರುವ ಕುರಿತು ವಿಧಾನ ಪರಿಷತ್ತಿನ ಭರವಸೆ ಸಂಖ್ಯೆ: 1177ರಲ್ಲಿ ವಿಷಯ ಪ್ರಸ್ತಾಪಿಸಲಾಗಿದ್ದು ಸಂಬಂಧಿಸಿದ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ಸಮಿತಿಯು ತೀರ್ಮಾನಿಸಿರುತ್ತದೆ. ಅದರಂತೆ ಸಂಬಂಧಿಸಿದ ಅಧಿಕಾರಿಗಳು ಹಾಲಿ ಸೇವೆಯಲ್ಲಿರುವ ಶ್ರೀ ಮಹಮ್ಮದ್ ವಜೀರ್ ಅಹಮ್ಮದ್, ಇ.ಐ.ಜಿ, ಕೆ.ಎಸ್.ಆರ್.ಪಿ, ಬೆಂಗಳೂರು ಮತ್ತು ಶ್ರೀ ಶ್ರೀಕಂಠಪ್ಪ, ಎಸ್.ಪಿ. ಕೆ.ಎಸ್.ಆರ್.ಪಿ, ಬೆಂಗಳೂರು ರವರುಗಳ ವಿರುದ್ಧ ಡಿ.ಐ.ಎಸ್ (ಡಿ ಅಂಡ್ ಎ) ನಿಯಮಾವಳಿಗಳು, 1969ರ ನಿಯಮ 8(6) (ಸಿ) ರ ಪ್ರಕಾರ ಜಂಟಿ ಇಲಾಖಾ ವಿಚಾರಣೆ ನಡೆಸಲು ಮತ್ತು ಲಿಪಿಕ ವರ್ಗದ ಅಧಿಕಾರಿಗಳಾದ ಶ್ರೀ ರಾಜಶೇಖರಾಚಾರ್, ಸಹಾಯಕ ಆಡಳಿತಾಧಿಕಾರಿ ಮತ್ತು ಶ್ರೀ ಸಿ. ಶಿವಯ್ಯ, ಶಾಖಾಧೀಕ್ಷಕರುಗಳ ವಿರುದ್ಧ ಕೆ.ಸಿ.ಎಸ್. (ಸಿ.ಸಿ.ಎ) ನಿಯಮಾವಳಿಗಳು ನಿಯಮ 11 ಮತ್ತು 13 ರಂತೆ ಜಂಟಿ ಇಲಾಖಾ ವಿಚಾರಣೆ ನಡೆಸಲು ಆರೋಪ ಪಟ್ಟಿಯನ್ನು ಡಿಜಿಪಿ ರವರು ತಯಾರಿಸಿ ಪ್ರಸ್ತಾವನೆಯನ್ನು ಮೇಲೆ ಓದಲಾದ (1)ರ ಪತ್ರದಲ್ಲಿ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (3)ರ ಪತ್ರದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಿಂದ ಡಿಜಿ ಮತ್ತು ಐಜಿಪಿ ರವರಿಗೆ ದಿನಾಂಕ 05–04–2010 ರಲ್ಲಿ ಬರೆದ ಪತ್ರದಲ್ಲಿ 756 ಪೊಲೀಸ್ ಕಾನ್ಸ್‌ಟೇಬಲ್‌ರವರ ಆಯ್ಕೆ ಮತ್ತು ನೇಮಕಾತಿ ಪ್ರಕ್ರಿಯೆಯು 2001 ರಲ್ಲಿ ನಡೆದಿದ್ದು, ಈಗ ಅಂದರೆ 9 ವರ್ಷಗಳ ನಂತರ ಸದರಿ ಪ್ರಕರಣವನ್ನು ಅಥವಾ ಅದರಲ್ಲಿ ನಡೆದಿರಬಹುದಾದ ಅವ್ಯವಹಾರಗಳಿಗೆ ಸಂಬಂಧಿಸಿದಂತೆ ಸಂಬಂಧಪಟ್ಟ ಅಧಿಕಾರಿಗಳ ವಿರುದ್ಧ ಈಗ ಶಿಸ್ತು ಕ್ರಮ ಪ್ರಾರಂಭಿಸುವ ಬಗ್ಗೆ ಪರಿಶೀಲಿಸುವುದು ಸಮಂಜಸವಲ್ಲವೆಂದು ಪರಿಗಣಿಸಿ ಪ್ರಕರಣವನ್ನು ಮುಕ್ತಾಯ ಮಾಡಲಾಗಿರುತ್ತದೆ.

ಮೇಲೆ ಓದಲಾದ (4)ರ ಪತ್ರಗಳಲ್ಲಿ ಡಿಜಿ ಮತ್ತು ಐಜಿಪಿ ರವರು ಶ್ರೀ ಮಹಮದ್ ವಜೀರ್ ಅಹಮದ್, ಐಪಿಎಸ್, ಅಗಿನ ಆಯ್ಕೆ ಸಮಿತಿಯ ಅಧ್ಯಕ್ಷರು ಹಾಗೂ ಡಿ.ಸಿ.ಪಿ. (ಆಡಳಿತ) ಮತ್ತು ಶ್ರೀ ಬಿ. ಶ್ರೀಕಂಠಪ್ಪ, ಅಂದಿನ ಎಸ್.ಪಿ, ಎಸ್.ಸಿ.ಆರ್.ಬಿ. ಹಾಗೂ ಶ್ರೀ ರಾಜಶೇಖರಾಚಾರ್, ಸಹಾಯಕ ಆಡಳಿತಾಧಿಕಾರಿ ಮತ್ತು ಶ್ರೀ ಬಿ. ಶಿವಯ್ಯ, ಶಾಖಾಧೀಕ್ಷರು ಇವರ ವಿರುದ್ಧ ಯಾವುದೇ ಕ್ರಮ ಜರುಗಿಸುವ ಅವಶ್ಯಕತೆ ಕಂಡು ಬರುವುದಿಲ್ಲವೆಂದು ಡಿಜಿ ಮತ್ತು ಐಜಿಪಿ ರವರು ಅಭಿಪ್ರಾಯ ಪಟ್ಟಿರುತ್ತಾರೆ.

ಶ್ರೀ ರಾಜಶೇಖರಾಚಾರ್, ಸಹಾಯಕ ಆಡಳಿತಾಧಿಕಾರಿ ಮತ್ತು ಶ್ರೀ ಬಿ. ಶಿವಯ್ಯ, ಶಾಖಾಧೀಕ್ಷಕರು ಇವರಿಗೆ ತಿಳುವಳಿಕೆ ಪತ್ರವನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ ನಿಯಮ 11 ಮತ್ತು 13ರಡಿಯಲ್ಲಿ ಹೊರಡಿಸಲಾಗಿದೆ. ಇವರು ಸಮಜಾಯಿಷಿಯನ್ನು ಸಲ್ಲಿಸಿದ್ದಲ್ಲಿ ಸಮಜಾಯಿಷಿಯನ್ನು ಪರಿಶೀಲಿಸಿ ಇಲಾಖಾ ವಿಚಾರಣೆ ನಡೆಸುವ ಬಗೆ ಸೂಕ್ತ ನಿರ್ಣಯ ಕೈಗೊಳ್ಳಬಹುದಾಗಿತ್ತು. ಆದರೆ ಇವರು ಸಮಜಾಯಿಷಿಯನ್ನು ಸಲ್ಲಿಸಲು ದಾಖಲಾತಿಗಳನ್ನು ಕೋರಿದ್ದು, ಈ ಸಂದರ್ಭದಲ್ಲಿ ಐ.ಪಿ.ಎಸ್. ವೃಂದಕ್ಕೆ ಸೇರಿದ ಅಧಿಕಾರಿಗಳ ವಿರುದ್ಧದ ಪ್ರಕರಣವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಮುಕ್ತಾಯಗೊಳಿಸಿರುವ ಹಿನ್ನೆಲೆಯಲ್ಲಿ ಅದರಲ್ಲಿ ಒಳಗೊಂಡಿರುವ ಲಿಪಿಕ ನೌಕರರ ವಿರುದ್ಧ ಪ್ರಸ್ತಾಪಿಸಿದ ಇಲಾಖಾ ವಿಚಾರಣೆಯನ್ನು ಮುಕ್ತಾಯಗೊಳಿಸಲು ನಿರ್ಣಯಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 44 ಪೊಸಿಪ 2009 ಬೆಂಗಳೂರು, ದಿನಾಂಕ: 18–11–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2000–01ನೇ ಸಾಲಿನಲ್ಲಿ 756 ಸಿವಿಲ್ ಪೋಲೀಸ್ ಪೇದೆಗಳ ನೇಮಕಾತಿಯಲ್ಲಿನ ಅವ್ಯವಹಾರದ ಬಗ್ಗೆ ಶ್ರೀ ಮಹಮ್ಮದ್ ವಜೀರ್ ಅಹಮ್ಮದ್, ಡಿ.ಐ.ಜಿ, ಕೆ.ಎಸ್.ಆರ್.ಪಿ, ಬೆಂಗಳೂರು ಮತ್ತು ಶ್ರೀ ಶ್ರೀಕಂಠಪ್ಪ, ಎಸ್.ಪಿ, ಕೆ.ಸ್.ಆರ್.ಪಿ, ಬೆಂಗಳೂರು ರವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆಯನ್ನು ಮಾಡುವ ಅಗತ್ಯ ಇಲ್ಲವೆಂದು ಪರಿಗಣಿಸಿ ಪ್ರಕರಣವನ್ನು ಮುಕ್ತಾಯಗೊಳಿಸುವ ಹಿನ್ನೆಲೆಯಲ್ಲಿ ಸದರಿ ಪ್ರಕರಣದಲ್ಲಿ ಒಳಗೊಂಡಿರುವ ಲಿಪಿಕ ಸಿಬ್ಬಂದಿಯವರಾದ ಶ್ರೀ ರಾಜಶೇಖರಾಚಾರ್, ಸಹಾಯಕ ಆಡಳಿತಾಧಿಕಾರಿ, ಶ್ರೀ ಬಿ. ಶಿವಯ್ಯ, ಶಾಖಾಧೀಕ್ಷಕರು ಇವರಿಗೆ ಸರ್ಕಾರಿ ಪತ್ರ ಸಂಖ್ಯೆ: ಒಇ 44 ಪೊಸಿಪ 2009 ದಿನಾಂಕ: 08–02–2010ರಲ್ಲಿ ಕೆ.ಸಿ.ಎಸ್. (ಸಿಸಿಎ) ನಿಯಮಗಳನ್ವಯ ನೀಡಲಾಗಿರುವ ತಿಳುವಳಿಕೆ ಪತ್ರವನ್ನು ರದ್ದುಪಡಿಸಲಾಗಿದೆ ಮತ್ತು ಇವರುಗಳ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಡಲಾಗಿದೆ ಎಂದು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ. ಎನ್. ರವಿಪ್ರಕಾಶ್**

ಪಿ.ಆರ್. ನಂ. 2792

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ** : ಒಳಾಡಳಿತ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಪಿಸಿಎಎಸ್), ಒಳಾಡಳಿತ ಇಲಾಖೆ ಇವರಿಗೆ ಹೊಸ ವಾಹನವನ್ನು ಒದಗಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ ಒಇ 69 ಸಶಾಸ 2010 ದಿನಾಂಕ 8–1–2011.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಸರ್ಕಾರದ ಕಾರ್ಯದರ್ಶಿ (ಪಿಸಿಎಎಸ್), ಒಳಾಡಳಿತ ಇಲಾಖೆ, ಇವರ ಉಪಯೋಗಕ್ಕಾಗಿ ಒಂದು ಹೊಸ ವಾಹನ ಖರೀದಿಗಾಗಿ ರೂ. 6.50 ಲಕ್ಷಗಳಲ್ಲಿ (ರೂಪಾಯಿ ಆರು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ) (ತೆರಿಗೆ ಹೊರತುಪಡಿಸಿ) ನಿಯಮಾನುಸಾರ ಸೂಕ್ತವಾದ ವಾಹನ ಖರೀದಿಸಲು ಹಾಗೂ ಪ್ರಸ್ತುತ ವಾಹನವನ್ನು ವಿಲೇವಾರಿ ಮಾಡಲು ಸರ್ಕಾರವು ಮಂಜೂರಾತಿ ನೀಡಿದೆ. ಈ ಸಂಬಂಧ ವಿವಿಧ ಕಂಪನಿಗಳಿಂದ ದರಪಟ್ಟಿಗಳನ್ನು ಸ್ವೀಕರಿಸಲಾಗಿದ್ದು ತೆರಿಗೆಗಳನ್ನು ಹೊರತುಪಡಿಸಿ, ಈ ಕೆಳಗಿನಂತೆ ದರಪಟ್ಟಿಗಳನ್ನು ನಮೂದಿಸಲಾಗಿದೆ:–

1) Ravindu Toyota, Bangalore =6,51,838-00

2) Advaith Hyundai, Bangalore =6,21,409-00

ಮೇಲೆ ತಿಳಿಸಿದ ಕಂಪನಿಗಳ ಪೈಕಿ ಅತಿಕಡಿಮೆ ದರಪಟ್ಟಿಯನ್ನು ಸಲ್ಲಿಸಿರುವ Advaith Hyundai, Bangalore, ಇವರಿಗೆ HYUNDAI VERNA VTVT 1.4 ಎಂಬ ಹೊಸ ವಾಹನವನ್ನು ಸರಬರಾಜು ಮಾಡಲು ಮಂಜೂರಾತಿ ಮಾಡಲು ಸರ್ಕಾರ ನಿರ್ಧರಿಸಿ ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ಒಇ 69 ಸಶಾಸ 2010, ಬೆಂಗಳೂರು, ದಿನಾಂಕ: 21–11–2011.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಒಳಾಡಳಿತ ಇಲಾಖೆಯ ಸರ್ಕಾರದ ಕಾರ್ಯದರ್ಶಿ(ಪಿಸಿಎಎಸ್)ಯವರ ಉಪಯೋಗಕ್ಕಾಗಿ, Advaith Hyundai, EªÀgÀÄ HYUNDAI VERNA VTVT 1.4 ಎಂಬ ಹೊಸ ವಾಹನವನ್ನು ರೂ. 6.50 ಲಕ್ಷಗಳ (ತೆರಿಗೆಗಳನ್ನು ಹೊರತುಪಡಿಸಿ) ಮಿತಿಯೊಳಗೆ ಸರಬರಾಜು ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2011–12ನೇ ಸಾಲಿನ ಲೆಕ್ಕಶೀರ್ಷಿಕೆ "2052–00–090–0–01–195"ರ ಅಡಿಯಲ್ಲಿ ಭರಿಸತಕ್ಕದ್ದು.

ಕಾರ್ಯದರ್ಶಿಗಳು (ಪಿಸಿಎಎಸ್), ಇವರ ಹಳೆಯ ವಾಹನ ಸಂಖ್ಯೆ ಕೆಎ.01.ಜಿಎ.4300ರ ಬಗ್ಗೆ ಪ್ರತ್ಯೇಕ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಆಇ 63 ವೆಚ್ಚ–11/2011 ದಿನಾಂಕ 19–3–2011ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿದ ಆರ್ಥಿಕ ಅಧಿಕಾರದ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ. ಕೃಷ್ಣಮೂರ್ತಿ**

ಪಿ.ಆರ್. ನಂ. 2793

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ, (ಸಮನ್ವಯ)

**ಒಳಾಡಳಿತ ಸಚಿವಾಲಯ**

**ವಿಷಯ** : ತ್ವರಿತ ವಸತಿ ಯೋಜನೆಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** : ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತ, ಬೆಂಗಳೂರು ರವರ ಪತ್ರ ಸಂಖ್ಯೆ: ಪಿಹೆಚ್‌ಸಿ/ಎಸಿಸಿಟಿಎಸ್/ ಪಿಎಂ(ಎ)/ಎಹೆಚ್‌ಎಸ್-III/ 2011-12, ದಿನಾಂಕ: 29-10-2011.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 29-10-2011.ರ ಪತ್ರದಲ್ಲಿ ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತ, ಬೆಂಗಳೂರು ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ತ್ವರಿತ ವಸತಿ ಯೋಜನೆ-3ರಡಿಯಲ್ಲಿ ರಾಜ್ಯದಲ್ಲಿ 6000 ವಸತಿಗೃಹಗಳನ್ನು ರೂ. 440.00 ಕೋಟಿ ವೆಚ್ಚದಲ್ಲಿ ನಿರ್ಮಿಸಲು ಆದೇಶ ಸಂಖ್ಯೆ: ಹೆಚ್‌ಡಿ 34 ಪಿಬಿಎಲ್ 2007 ದಿನಾಂಕ: 1/2/2011ರಂದು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ. ತದನಂತರದಲ್ಲಿ ಈ ವಸತಿಗೃಹಗಳ ಸಂಖ್ಯೆಯನ್ನು 4333ಕ್ಕೆ ಕಡಿತಗೊಳಿಸಲಾಗಿದೆ. 2010-11ನೇ ಸಾಲಿನವರೆಗೆ ಈ ಉದ್ದೇಶಕ್ಕಾಗಿ ರೂ. 124.00 ಕೋಟಿಗಳನ್ನು ನೀಡಲ್ಪಟ್ಟಿದ್ದು, 2011-12ನೇ ಸಾಲಿನ ಆಯವ್ಯಯದಲ್ಲಿ ನಿಗದಿಯಾದ ರೂ. 40.00 ಕೋಟಿಗಳಲ್ಲಿ ರೂ. 10.00 ಕೋಟಿಗಳನ್ನು ಸರ್ಕಾರವು ಆದೇಶ ಸಂಖ್ಯೆ: ಹೆಚ್‌ಡಿ 43 ಪಿಬಿಎಲ್ 2008, ದಿನಾಂಕ 16/06/2011 ರಂದು ಮತ್ತು ಹೆಚ್‌ಡಿ 43 ಪಿಬಿಎಲ್ 2008, ದಿನಾಂಕ: 30/09/2011ರಂದು 10.00 ಕೋಟಿಗಳು ಸೇರಿದಂತೆ ಅಕ್ಟೋಬರ್ 2011ರ ಅಂತ್ಯದವರೆಗೆ ಒಟ್ಟು ರೂ. 144.00 ಕೋಟಿ ರೂಪಾಯಿಗಳನ್ನು ಮಂಜೂರು ಮಾಡಲಾಗಿರುತ್ತದೆ. ಹೆಚ್‌ಡಿ 43 ಪಿಬಿಎಲ್ 2008, ದಿನಾಂಕ: 04/02/2010ರಂದು ಸರ್ಕಾರವು ನೀಡಿರುವ ಆದೇಶದನ್ವಯ ವಿವಿಧ ಕಾಮಗಾರಿಗಳಿಗೆ ಟೆಂಡರ್ ಕರೆದು ರೂ. 232.00 ಕೋಟಿಗಳ ವೆಚ್ಚದಲ್ಲಿ ರಾಜ್ಯಾದ್ಯಂತ 2431 ವಸತಿ ಗೃಹಗಳನ್ನು ಕಾಮಗಾರಿಗಳಲ್ಲಿ 2027 ವಸತಿಗೃಹಗಳ ಕೈಗೆತ್ತಿಕೊಳ್ಳಲಾಗಿದೆ. ಈ ಎಲ್ಲಾ ಕಾಮಗಾರಿಗಳಿಗೆ ಸರ್ಕಾರವು ಬಿಡುಗಡೆ ಮಾಡಿರುವ ಅನುದಾನಕ್ಕಿಂತ ರೂ. 35.02 ಕೋಟಿಗಳ ಹೆಚ್ಚಿಗೆ ಹಣವನ್ನು ಖರ್ಚು ಮಾಡಲಾಗಿದೆ. ಆದುದರಿಂದ 2011-12ನೇ ಸಾಲಿನ ಆಯವ್ಯಯದಲ್ಲಿ ಕಲ್ಪಿಸಿರುವ ಅನುದಾನದಲ್ಲಿ ಸರ್ಕಾರವು ಈಗಾಗಲೇ ಬಿಡುಗಡೆ ಮಾಡಿರುವ ರೂ. 20.00 ಕೋಟಿಗಳನ್ನು ಹೊರತುಪಡಿಸಿ ಬಾಕಿ ಉಳಿದಿರುವ ರೂ. 20.00 ಕೋಟಿಗಳನ್ನು ಮತ್ತು ಸದರಿ ಕಾಮಗಾರಿಗಳಿಗೆ ಅಗತ್ಯಕ್ಕಿಂತ ಹೆಚ್ಚಿಗೆ ವೆಚ್ಚ ಮಾಡಿರುವುದರಿಂದ ರೂ. 68.00 ಕೋಟಿಗಳ ಹೆಚ್ಚುವರಿ ಅನುದಾನವನ್ನು ಬಿಡುಗಡೆ ಮಾಡಿ ಪೆಯೀಸ್ ರಸೀದಿಯಲ್ಲಿ ಖಜಾನೆಯಿಂದ ಡ್ರಾ ಮಾಡಲು ಸರ್ಕಾರದ ಮಂಜೂರಾತಿಯನ್ನು ಕೋರಿರುತ್ತಾರೆ.

ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತ, ಬೆಂಗಳೂರು ರವರ ಪ್ರಸ್ತಾವನೆಯನ್ನು ಪರಿಶೀಲಿಸಿ, 2011-12ನೇ ಸಾಲಿನ ಆಯವ್ಯಯದಲ್ಲಿ ಈ ಪ್ರಸ್ತಾವನೆಗೆ ಸಂಬಂಧಿಸಿದಂತೆ ಆಯವ್ಯಯದಲ್ಲಿ ಕಲ್ಪಿಸಿರುವ ರೂ. 40.00 ಕೋಟಿಗಳಲ್ಲಿ ಪ್ರಥಮ ಕಂತಾಗಿ ರೂ.0.00 ಕೋಟಿ ದ್ವಿತೀಯ ಕಂತಾಗಿ ರೂ. 10.00 ಕೋಟಿಗಳನ್ನು ಈಗಾಗಲೇ ಬಿಡುಗಡೆ ಮಾಡಿರುವುದರಿಂದ ಮೂರನೇ ಮತ್ತು ನಾಲ್ಕನೇ ಕಂತಾಗಿ ರೂ. 20.00 ಕೋಟಿಗಳನ್ನು ಬಿಡುಗಡೆ ಮಾಡಲು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಹೆಚ್‌ಡಿ 43 ಪಿಬಿಎಲ್ 2008, ಬೆಂಗಳೂರು, ದಿನಾಂಕ: 12-12-2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ತ್ವರಿತ ವಸತಿ-3ರ ಯೋಜನೆಗೆ ಮೂರನೇ ಮತ್ತು ನಾಲ್ಕನೇ ಕಂತಾಗಿ ರೂ. 20.00 ಕೋಟಿಗಳನ್ನು (ಇಪ್ಪತ್ತು ಕೋಟಿ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಲಭ್ಯವಿರುವ ಅನುದಾನವನ್ನು ಬಳಸಿಕೊಂಡ ಬಳಿಕವೇ ಹೆಚ್ಚುವರಿ ಅನುದಾನದ ಪ್ರಸಾವನೆಯನ್ನು ಕೊನೆಯ ತ್ರೈಮಾಸಿಕದಲ್ಲಿ ಸರ್ಕಾರಕ್ಕೆ ಕಳುಹಿಸಕೊಡುವುದು.

ಈ ವೆಚ್ಚವನ್ನು 2011-12ನೇ ಸಾಲಿನ ಲೆಕ್ಕಶೀರ್ಷಿಕೆ "4055-00-211-0-01-211 (ಯೋಜನೆ) ಇದರಡಿಯಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 325 ವೆಚ್ಚ-11/2011 ದಿನಾಂಕ: 26/11/2011ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ರಾಜಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ, (ಪೊಲೀಸ್ ವೆಚ್ಚ)

ಪಿ.ಆರ್. ನಂ. 2794

**ವಸತಿ ಸಚಿವಾಲಯ**

**ವಿಷಯ** : ಸಿದ್ದಾಪುರ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ

**ಓದಲಾಗಿದೆ** : ಸರ್ಕಾರದ ಆದೇಶ ಸಂಖ್ಯೆ: ವಇ 42 ಹೆಚ್‌ಎಎಂ 1999, ದಿನಾಂಕ: 10-05-2000

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ರಚಿಸಲು ತೀರ್ಮಾನಿಸಿದ್ದು, ಅದರಂತೆ ಉತ್ತರ ಕನ್ನಡ ಜಿಲ್ಲೆ, ಸಿದ್ದಾಪುರ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 51 ಹೆಚ್‌ಎಎಸ್ 2011, ಬೆಂಗಳೂರು, ದಿನಾಂಕ : 31-10-2011.**

ಉತ್ತರ ಕನ್ನಡ ಜಿಲ್ಲೆಯ ಸಿದ್ದಾಪುರ ಪಟ್ಟಣ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| ಕ್ರ.ಸಂ. | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ಮಾರುತಿ ವೆಂಕಟೇಶ ನಾಯಕ, ಮಾರುತಿ ಹೋಟೆಲ್, ಸಿದ್ದಾಪುರ | ಸಾಮಾನ್ಯ |
| 2 | ಶ್ರೀ ಗಣಪತಿ ಕನ್ನಾ ನಾಯ್ಕ ಕೊಪ್ಪ, ಸಿದ್ದಾಪುರ | ಹಿಂ.ವ. |
| 3 | ಶ್ರೀಮತಿ ಹೇಮಾವತಿ ಮಾರುತಿ ಹಸ್ಲಾರ, ಕೆನ್ನಳ್ಳಿ, ಸಿದ್ದಾಪುರ | ಎಸ್.ಸಿ. |
| 4 | ಶ್ರೀಮತಿ ಲೀನಾ ಮುಸ್ಸೀಸ್ ಫರ್ನಾಂಡೀಸ್, ಹೊಸೂರು, ಸಿದ್ದಾಪುರ | ಅ.ಸಂ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ. ವೆಂಕಟೇಶನ್**
ಪೀಠಾಧಿಕಾರಿ–2 (ಪ್ರ),
ಪಿ.ಆರ್. 2693 ವಸತಿ ಇಲಾಖೆ

## ವಸತಿ ಸಚಿವಾಲಯ

**ವಿಷಯ :** ಚಿತ್ರದುರ್ಗ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ
**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ: ವಇ 42 ಹೆಚ್‌ಎಎಂ 1999, ದಿನಾಂಕ: 10–05–2000

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ರಚಿಸಲು ತೀರ್ಮಾನಿಸಿದ್ದು, ಅದರಂತೆ ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 64 ಹೆಚ್‌ಎಎಸ್ 2011, ಬೆಂಗಳೂರು, ದಿನಾಂಕ : 31–10–2011.**

ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| ಕ್ರ.ಸಂ. | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ರಾಘವೇಂದ್ರ, ಉಯ್ಯಾಲೆ ಕಂಬದ ಹತ್ತಿರ, ದೊಡ್ಡಪೇಟೆ, ಚಿತ್ರದುರ್ಗ | ಸಾಮಾನ್ಯ |
| 2 | ಶ್ರೀ ಎಂ. ಹೆಚ್. ಶಶಿಧರ ಬಿನ್ ಹರೀಶ್ ಹೆಚ್. 1ನೇ ಅಡ್ಡರಸ್ತೆ, ಸಿ.ಕೆ.ಪುರ, ಕೆಳಗೋಟೆ, ಚಿತ್ರದುರ್ಗ | ಎಸ್.ಸಿ. |
| 3 | ಶ್ರೀಮತಿ ಕೆ. ವಿಜಯಲಕ್ಷ್ಮಿ ಕೋಂ ಪಿ. ಕೃಷ್ಣಮೂರ್ತಿ, ಐಯಣ್ಣಪೇಟೆ, ಎಸ್.ಜೆ.ಎಂ. ಸಮುದಾಯ ಭವನದ ಹತ್ತಿರ, ಚಿತ್ರದುರ್ಗ | ಹಿಂ.ವ. (ಮಹಿಳೆ) |
| 4 | ಶ್ರೀ ಮಕ್ಸೂದ್ ಪಾಷಾ ಬಿನ್ ಲೇಟ್ ಅಬ್ದುಲ್ ಬಷೀರ್ ಸಾಬ್, ಸಿಲಿಕಾನ ರಿಯಲ್ ಎಸ್ಟೇಟ್, ಸಂತೆ ಮೈದಾನ ರಸ್ತೆ, ಟಿ.ವಿ.ಎಸ್. ಶೋರೂಂ, ಚಿತ್ರದುರ್ಗ–577 501. | ಅ.ಸಂ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ. ವೆಂಕಟೇಶನ್**
ಪೀಠಾಧಿಕಾರಿ–2 (ಪ್ರ),
ಪಿ.ಆರ್. 2694 ವಸತಿ ಇಲಾಖೆ

## ವಸತಿ ಸಚಿವಾಲಯ

**ವಿಷಯ :** ಹಿರಿಯೂರು ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ
**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ: ವಇ 42 ಹೆಚ್‌ಎಎಂ 1999, ದಿನಾಂಕ: 10–05–2000

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ರಚಿಸಲು ತೀರ್ಮಾನಿಸಿದ್ದು, ಅದರಂತೆ ಚಿತ್ರದುರ್ಗ ಜಿಲ್ಲೆ, ಹಿರಿಯೂರು ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 61 ಹೆಚ್‌ಎಎಸ್ 2011, ಬೆಂಗಳೂರು, ದಿನಾಂಕ : 31–10–2011.**

ಚಿತ್ರದುರ್ಗ ಜಿಲ್ಲೆಯ ಹಿರಿಯೂರು ಪಟ್ಟಣ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| ಕ್ರ.ಸಂ. | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀಮತಿ ವಿಜಯಲಕ್ಷ್ಮಿ ಕೋಂ, ಬಿ. ಸಿದ್ದಪ್ಪ, ಸಿ.ಎಂ. ಬಡಾವಣೆ, ಹಿರಿಯೂರು ಟೌನ್, ಚಿತ್ರದುರ್ಗ ಜಿಲ್ಲೆ | ಎಸ್.ಸಿ. (ಮಹಿಳೆ) |
| 2 | ಶ್ರೀ ಜಿ. ಸೋಮಶೇಖರ್ ಬಿನ್ ಗೋವಿಂದಪ್ಪ ಕೇರಾಫ್ ಎಂ. ಆರ್. ಸ್ವಾಮಿ ನಿಲಯ, ಎನ್.ಹೆಚ್. 4 ಸರ್ವೀಸ್ ರಸ್ತೆ, ಬಿ. ಎಲ್. ಗೌಡನಗರ, ಹಿರಿಯೂರು | ಸಾಮಾನ್ಯ |
| 3 | ಶ್ರೀ ಕೆ. ಪರಮೇಶ್ವರ್ ಬಿನ್ ವೈ. ಕೃಷ್ಣಾಚಾರ್, ಮಿರ್ಜಾ ಬಡಾವಣೆ, ದುರ್ಗಿ ಗುಡಿ ಹಿಂಭಾಗ, ಹಿರಿಯೂರು. | ಹಿಂ. ವ. |
| 4 | ಶ್ರೀ ಗೌತಮ್ ಚಂದ್ ಬಿನ್ ಚಿರಂಜಿಲಾಲ್, ಸತ್ಯನಾರಾಯಣ ದೇವಸ್ಥಾನದ ಪಕ್ಕ, ಹಿರಿಯೂರು | ಅ.ಸಂ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ. ವೆಂಕಟೇಶನ್**
ಪೀಠಾಧಿಕಾರಿ–2 (ಪ್ರ),
ಪಿ.ಆರ್. 2695 ವಸತಿ ಇಲಾಖೆ

## ವಸತಿ ಸಚಿವಾಲಯ

**ವಿಷಯ :** ತಿ. ನರಸೀಪುರ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ: ವಇ 42 ಹೆಚ್‌ಎಎಂ 1999, ದಿನಾಂಕ: 10-05-2000

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ರಚಿಸಲು ತೀರ್ಮಾನಿಸಿದ್ದು, ಅದರಂತೆ ಮೈಸೂರು ಜಿಲ್ಲೆ, ತಿ. ನರಸೀಪುರ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 63 ಹೆಚ್‌ಎಎಸ್ 2011, ಬೆಂಗಳೂರು, ದಿನಾಂಕ : 31-10-2011.**

ಮೈಸೂರು ಜಿಲ್ಲೆ, ತಿ. ನರಸೀಪುರ ಪಟ್ಟಣ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| ಕ್ರ.ಸಂ. | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ಸಿ. ರಮೇಶ್, ಮಾಜಿ ಶಾಸಕರು, ಗೋಪಾಲಪುರ, ತಿ. ನರಸೀಪುರ ಟೌನ್ | ಸಾಮಾನ್ಯ |
| 2 | ಶ್ರೀಮತಿ ಮೀನಾಕ್ಷಿ ಕೋ ಶ್ರೀ ಸಿದ್ದನಾಯಕ, ಮನೆ ನಂ. 52, ಮಸೀದಿ ರಸ್ತೆ, ವಿನಾಯಕ ಕಾಲೋನಿ, ತಿ. ನರಸೀಪುರ. | ಎಸ್.ಟಿ. ಮಹಿಳೆ |
| 3 | ಶ್ರೀ ಆರ್. ರಾಮಸ್ವಾಮಿ ಬಿನ್ ಶ್ರೀ ಎಂ. ಆರ್. ರಾಮಸ್ವಾಮಿ, ಮನೆ ನಂ. 851, ಪಿ.ಎಲ್.ಡಿ. ಬ್ಯಾಂಕ್ ರಸ್ತೆ, ತಿ. ನರಸೀಪುರ. | ಹಿಂ. ವರ್ಗ |
| 4 | ಶ್ರೀ ಅತ್ತಾಉಲ್ಲಾ ಬಿನ್ ಶ್ರೀ ಗೌಸ್‌ಸಾಬ್, ಜಾಮೀಯ ಮಸೀದಿ ಬೀದಿ, ತಿ. ನರಸೀಪುರ ತಾಲ್ಲೂಕು | ಅ.ಸಂ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ. ವೆಂಕಟೇಶನ್**

ಪೀಠಾಧಿಕಾರಿ-2 (ಪ್ರ),

ವಸತಿ ಇಲಾಖೆ

ಪಿ.ಆರ್. 2696

## ವಸತಿ ಸಚಿವಾಲಯ

**ವಿಷಯ :** ಶಿರಸಿ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ: ವಇ 42 ಹೆಚ್‌ಎಎಂ 1999, ದಿನಾಂಕ: 10-05-2000

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ರಚಿಸಲು ತೀರ್ಮಾನಿಸಿದ್ದು, ಅದರಂತೆ ಉತ್ತರ ಕನ್ನಡ ಜಿಲ್ಲೆ, ಶಿರಸಿ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 52 ಹೆಚ್‌ಎಎಸ್ 2011, ಬೆಂಗಳೂರು, ದಿನಾಂಕ : 31-10-2011.**

ಉತ್ತರ ಕನ್ನಡ ಜಿಲ್ಲೆ, ಶಿರಸಿ ಪಟ್ಟಣ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| ಕ್ರ.ಸಂ. | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ಗುರುರಾಜ ಹೆಗಡೆ, ನೀಲೇಕಣಿ, ಶಿರಸಿ | ಸಾಮಾನ್ಯ |
| 2 | ಶ್ರೀಮತಿ ಉಷಾ ನಾಯ್ಕ, ಕಸ್ತೂರಿಬಾ ನಗರ, ಶಿರಸಿ | ಹಿಂ.ವರ್ಗ |
| 3 | ಶ್ರೀ ನಹಿಮ್ ನೆರೆಮಾನ್, ಅಬ್ದುಲ್ ಗಫಾರ ಜ್ಯೆಲರ, ಮುಸ್ಲಿಂ ಗಲ್ಲಿ | ಅಲ್ಪ.ಸಂ. |
| 4 | ಶ್ರೀ ಅನುಪ ರವಿಚಂದ್ರ ನೇತ್ರೇಕರ, ಶ್ರದ್ಧಾನಂದಗಲ್ಲಿ | ಎಸ್.ಸಿ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ. ವೆಂಕಟೇಶನ್**

ಪೀಠಾಧಿಕಾರಿ-2 (ಪ್ರ),

ವಸತಿ ಇಲಾಖೆ

ಪಿ.ಆರ್. 2697

## ಇಂಧನ ಸಚಿವಾಲಯ

**ವಿಷಯ :** ವಿತರಣಾ ಕಂಪನಿಗಳಿಗೆ ವಿದ್ಯುತ್ ಹಂಚಿಕೆ

**ಓದಲಾಗಿದೆ :** 1)ಸರ್ಕಾರದ ಆದೇಶ ಸಂಖ್ಯೆ: ಇಎನ್ 45 ಪಿಎಸ್‌ಆರ್ 2006, ದಿನಾಂಕ 22-04-2006

**2)** ಪತ್ರ ಸಂಖ್ಯೆ: ಇಎನ್ 70 ಇಎಮ್‌ಸಿ 2009, ದಿನಾಂಕ 10-11-2009

**3)** ಸರ್ಕಾರಿ ಆದೇಶ ಸಂಖ್ಯೆ: ಇಎನ್ 126 ಇಎಮ್‌ಸಿ 2010, ದಿನಾಂಕ 24-03-2010

**4)** ಸರ್ಕಾರಿ ಆದೇಶ ಸಂಖ್ಯೆ: ಇಎನ್ 126 ಇಎಮ್‌ಸಿ 2010, ದಿನಾಂಕ 12-10-2011

**ಪ್ರಸ್ತಾವನೆ :**

ರಾಜ್ಯ ಸರ್ಕಾರವು ಆದೇಶ ಸಂಖ್ಯೆ ಇಎನ್ 126 ಇಎಂಸಿ 2010 ದಿನಾಂಕ 24-3-2010ರಲ್ಲಿ ತಿಳಿಸಿರುವಂತೆ, ರಾಜ್ಯದಲ್ಲಿ ವಿವಿಧ ಮೂಲಗಳಿಂದ ನಿತ್ಯ ಲಭ್ಯವಿರುವ ಒಟ್ಟಾರೆ ವಿದ್ಯುತ್ ಪ್ರಮಾಣದಲ್ಲಿ ಎಲ್ಲಾ ವಿತರಣಾ ಕಂಪನಿಗಳಿಗೆ ಕೆಳಕಂಡಂತೆ ಶೇಕಡಾವಾರು ಪ್ರಮಾಣದಲ್ಲಿ ವಿದ್ಯುತ್ ಹಂಚಿಕೆ ಮಾಡಲಾಗಿರುತ್ತದೆ.

| ವಿತರಣಾ ಕಂಪನಿ | ಶೇಕಡಾವಾರು ವಿದ್ಯುತ್ ಹಂಚಿಕೆ ಪ್ರಮಾಣ |
|---|---|
| ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ | 49.62 |
| ಮಂಗಳೂರು ವಿದ್ಯುತ್ ಸರಬರಾಜು ಕಂಪನಿ | 8.33 |
| ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ | 18.18 |
| ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ | 13.26 |
| ಚಾಮುಂಡೇಶ್ವರಿ ವಿದ್ಯುತ್ ನಿಗಮ ನಿಯಮಿತ | 10.61 |
| **ಒಟ್ಟು** | **100.00** |

ವಿತರಣಾ ಕಂಪನಿಗಳಿಗೆ ವಿದ್ಯುತ್ ಹಂಚಿಕೆ ಪ್ರಮಾಣವನ್ನು ಕಂಪನಿಗಳು ನಿತ್ಯ ಬಳಸುವ ಸರಾಸರಿ ವಿದ್ಯುತ್ ಪ್ರಮಾಣವನ್ನು ಗಮನದಲ್ಲಿಟ್ಟುಕೊಂಡು ಹಂಚಿಕೆ ಮಾಡಲಾಗಿರುತ್ತದೆ. ಪ್ರತಿ ವರ್ಷದ ವಿದ್ಯುತ್ ಬಳಕೆಯ ಪ್ರಮಾಣದಲ್ಲಿ ಸರಾಸರಿ ಶೇ. 8 ರಷ್ಟು ಬೆಳವಣಿಗೆ ಕಂಡುಬಂದಿರುತ್ತದೆ ಮತ್ತು ಋತುಮಾನ ಬದಲಾವಣೆಗಳಿಂದಾಗಿ ಕೆಲವು ವಿತರಣಾ ಕಂಪನಿಗಳಲ್ಲಿ ಹಂಚಿಕೆ ಮತ್ತು ಬಳಕೆ ಪ್ರಮಾಣದಲ್ಲಿ ವ್ಯತ್ಯಾಸ ಕಂಡು ಬಂದಿರುತ್ತದೆ. ಇತ್ತೀಚಿನ ಸರ್ಕಾರಿ ಆದೇಶ ಸಂಖ್ಯೆ: ಇಎನ್ 126 ಇಎಂಸಿ 2010 ದಿನಾಂಕ 12–10–2011 ರಲ್ಲಿ ತಿಳಿಸಿರುವಂತೆ ವಿದ್ಯುತ್ ಸರಬರಾಜು ಕಂಪನಿಗಳು ವಿವಿಧ ಮೂಲಗಳಿಂದ ಖರೀದಿಸುವ ವಿದ್ಯುತ್ತಿನ ಪ್ರಮಾಣವನ್ನು ಮರು ಹಂಚಿಕೆ ಮಾಡಲಾಗಿರುತ್ತದೆ. ಇದರ ಉದ್ದೇಶವು ವಿವಿಧ ಕಂಪನಿಗಳ ಆರ್ಥಿಕ ಹೊರೆಯನ್ನು ಸರಿದೂಗಿಸಿ, ರಾಜ್ಯದ ವಿವಿಧ ಭಾಗಗಳಲ್ಲಿರುವ ಗ್ರಾಹಕರ ಹಿತಾಸಕ್ತಿಯನ್ನು ಕಾಪಾಡುವ ದೃಷ್ಟಿಯಿಂದ KERC ಯವರ ಸೂಚನೆ ಮೇರೆಗೆ ಮರು ಹಂಚಿಕೆ ಮಾಡಲಾಗಿದೆ. ಈ ಮರು ಹಂಚಿಕೆ ಪ್ರಮಾಣವು ಕಂಪನಿಗಳು ವಿವಿಧ ಮೂಲಗಳಿಂದ ವಿದ್ಯುತ್ ಖರೀದಿಸುವ ಬಿಲ್ ಪಾವತಿ ಉದ್ದೇಶಕ್ಕಾಗಿ ಮಾತ್ರ ಬಳಸಬಹುದಾಗಿದೆ. ಈ ಸಂಬಂಧವಾಗಿ ವಿವಿಧ ಮೂಲಗಳ ವಿದ್ಯುತ್ ಖರೀದಿಸುವ ಪ್ರಮಾಣ ಮತ್ತು ನಿತ್ಯ ವಿದ್ಯುತ್ ಬಳಕೆಯ ಪ್ರಮಾಣದಲ್ಲಿ, ವ್ಯತ್ಯಾಸ ಕಂಡು ಬಂದಿದ್ದು, ಈ ಅಸಮತೋಲನವನ್ನು ಸರಿಪಡಿಸುವ ಉದ್ದೇಶದಿಂದ ವಿದ್ಯುತ್ ಸರಬರಾಜು ಕಂಪನಿಗಳಿಗೆ ದಿನನಿತ್ಯದ ವಿದ್ಯುತ್ ಹಂಚಿಕೆ ಪ್ರಮಾಣದಲ್ಲಿ ಮಾರ್ಪಾಡು ಮಾಡಬೇಕೆಂಬ ಅಂಶವನ್ನು ಮನಗಾಣಲಾಯಿತು. ಅದರಂತೆ ವಿವಿಧ ವಿದ್ಯುತ್ ಸರಬರಾಜು ಕಂಪನಿಗಳಿಗೆ ನಿತ್ಯ ವಿದ್ಯುತ್ ಬಳಕೆಯ ಉದ್ದೇಶದಿಂದ ರಾಜ್ಯದಲ್ಲಿ ಒಟ್ಟಾರೆ ಲಭ್ಯವಿರುವ (ಕಂಪನಿಗಳ ಖರೀದಿ ಹೊರತುಪಡಿಸಿ) ವಿದ್ಯುತ್ ಪ್ರಮಾಣವನ್ನು ಆಧರಿಸಿ ಮರು ಹಂಚಿಕೆ ಮಾಡಲು ಆದೇಶ ಹೊರಡಿಸುವ ಅಗತ್ಯತೆಯನ್ನು ನಿರ್ಧರಿಸಲಾಯಿತು.

ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 81 ವಿಎಸ್‌ಸಿ 2011, ಬೆಂಗಳೂರು, ದಿನಾಂಕ : 03–11–2011.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಸಂದರ್ಭದಲ್ಲಿ ಸರ್ಕಾರವು ವಿತರಣಾ ಕಂಪನಿಗಳಿಗೆ ಈ ಕೆಳಕಂಡಂತೆ ಶೇಕಡಾವಾರು ವಿದ್ಯುಚ್ಛಕ್ತಿ ಪ್ರಮಾಣವನ್ನು ಈ ಆದೇಶದಲ್ಲಿ ತಿಳಿಸಿರುವ ನಿಬಂಧನೆಗೊಳಪಟ್ಟು ಮರು ಹಂಚಿಕೆ ಮಾಡಲಾಗಿರುತ್ತದೆ.

| ವಿತರಣಾ ಕಂಪನಿ | ಶೇಕಡಾವಾರು ವಿದ್ಯುತ್ ಹಂಚಿಕೆ ಪ್ರಮಾಣ |
|---|---|
| ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ | 49.00 |
| ಮಂಗಳೂರು ವಿದ್ಯುತ್ ಸರಬರಾಜು ಕಂಪನಿ | 8.33 |
| ಚಾಮುಂಡೇಶ್ವರಿ ವಿದ್ಯುತ್ ನಿಗಮ ನಿಯಮಿತ | 10.65 |
| ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ | 18.50 |
| ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ | 13.52 |
| ಒಟ್ಟು | 100.00 |

**ನಿಬಂಧನೆಗಳು:–**

1. ಈ ಆದೇಶವು 4–11–2011 ರಿಂದ ಜಾರಿಗೆ ಬರಲಿದೆ ಮತ್ತು ಡಿಸೆಂಬರ್–2011ರ ಅಂತ್ಯದವರೆಗೆ ಜಾರಿಯಲ್ಲಿರುತ್ತದೆ.
2. ಈ ಶೇಕಡಾವಾರು ವಿದ್ಯುತ್ ಹಂಚಿಕೆ ಪ್ರಮಾಣವು ಮುಂಬರುವ ಎಲ್ಲಾ ಹೊಸ ದೀರ್ಘಾವಧಿ ವಿದ್ಯುತ್ ಯೋಜನೆಗಳಿಂದ ಲಭ್ಯವಿರುವ ವಿದ್ಯುತ್ ಪ್ರಮಾಣಕ್ಕೆ ಅನ್ವಯಿಸುತ್ತದೆ.
3. ಈ ಹಂಚಿಕೆ ಪ್ರಮಾಣವು ರಾಜ್ಯದಲ್ಲಿ ಸ್ಥಾಪಿಸಲಾಗಿರುವ ಎಲ್ಲಾ ಸಾಂಪ್ರದಾಯಿಕ ವಿದ್ಯುತ್ ಮೂಲಗಳು, ಕೇಂದ್ರೀಯ ವಿದ್ಯುತ್ ಘಟಕಗಳು ಬೃಹತ್ ಸ್ವತಂತ್ರ ವಿದ್ಯುತ್ ಉತ್ಪಾದಕರುಗಳಿಂದ ನಿತ್ಯ ಲಭ್ಯವಿರುವ ವಿದ್ಯುತ್ ಪ್ರಮಾಣವನ್ನು ಆಧರಿಸಿರುತ್ತದೆ. ವಿತರಣಾ ಕಂಪನಿಗಳು ಸ್ವತಂತ್ರವಾಗಿ ಖರೀದಿ ಮಾಡುವ ಅಲ್ಪಾವಧಿ ವಿದ್ಯುತ್ ಪ್ರಮಾಣವು ಈ ಹಂಚಿಕೆಯಲ್ಲಿ ಸೇರಿರುವುದಿಲ್ಲ.
4. ಈ ಶೇಕಡಾವಾರು ಹಂಚಿಕೆ ಪ್ರಮಾಣವು ಅಸಂಪ್ರದಾಯಿಕ ಇಂಧನ ಮೂಲಗಳ ವಿದ್ಯುಚ್ಛಕ್ತಿಗೆ ಅನ್ವಯಿಸುವುದಿಲ್ಲ
5. ಈ ಶೇಕಡಾವಾರು ಹಂಚಿಕೆ ಪ್ರಮಾಣವನ್ನು ವಿತರಣಾ ಕಂಪನಿಗಳು ವಿದ್ಯುತ್ ಖರೀದಿ ಒಪ್ಪಂದ (PPA) ದ ಮೂಲಕ ಇತರೆ ಮೂಲಗಳಿಂದ ಖರೀದಿಸಿ ಬೇರೆಯಾಗಿ ಹಣ ಪಾವತಿ ಮಾಡುತ್ತಿರುವ ವಿದ್ಯುಚ್ಛಕ್ತಿ ಪ್ರಮಾಣವನ್ನು ಹೊರತುಪಡಿಸಿ ನಿಗದಿಪಡಿಸಲಾಗಿದೆ.
6. ಈ ಶೇಕಡಾವಾರು ಹಂಚಿಕೆಯು ವಿತರಣಾ ಕಂಪನಿಗಳು ಬಳಕೆಮಾಡದಿರುವ wheeled energy ಗೆ ಅನ್ವಯಿಸುವುದಿಲ್ಲ.
7. ಈ ಆದೇಶದಂತೆ ವಿತರಣಾ ಕಂಪನಿವಾರು ಹಂಚಿಕೆ ಮಡಲಾದ ವಿದ್ಯುತ್ ಪ್ರಮಾಣವನ್ನು ತಪ್ಪದೇ ಪಾಲಿಸುವುದು ಮತ್ತು ಈ ಹಂಚಿಕೆಯು ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ.
8. ಈ ಆದೇಶವನ್ನು ದೈನಂದಿನ ಲಭ್ಯವಿರುವ ವಿದ್ಯುತ್ತನ್ನು ಹಂಚಿಕೆ ಮಾಡಲು ಪಾಲಿಸಬೇಕಾಗಿದೆ ಹಾಗೂ ವಿದ್ಯುತ್ ಖರೀದಿ ಬಿಲ್ ಪಾವತಿಗೆ ಸರ್ಕಾರಿ ಆದೇಶ ಸಂಖ್ಯೆ ಇಎನ್ 126 ಇಎಂಸಿ 2010 ದಿನಾಂಕ 12–10–2011ನ್ನು ಆಧರಿಸಬೇಕಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2698 ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ: ಏಟ್ರಿಯಾ ಬೃಂದಾವನ್ ಪವರ್ ಲಿಮಿಟೆಡ್ ಇವರಿಗೆ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಹನುಮನ ಹಳ್ಳ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :** 1)ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕ್ರೆಡಲ್/06/SH-772/Hanuman Hall MHS/611, ದಿನಾಂಕ 03/17-02-2011 ಮತ್ತು ಕ್ರೆಡಲ್/06/SH-772/Hanumana Halla SHP/2011/1500, ದಿನಾಂಕ 23/26-05-2011.

2) ದಿನಾಂಕ 27-05-2011ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಏಟ್ರಿಯಾ ಬೃಂದಾವನ್ ಪವರ್ ಲಿಮಿಟೆಡ್ ಇವರಿಗೆ ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕು, ಚಿಕ್ಕಯರಹಳ್ಳಿ ಗ್ರಾಮ ಪ್ರದೇಶದಲ್ಲಿ ಕೆ.ಆರ್.ಎಸ್. ಅಣೆಕಟ್ಟು, ಉತ್ತರ ದಡದ ಹತ್ತಿರ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಹನುಮನ ಹಳ್ಳ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ: ಏಟ್ರಿಯಾ ಬೃಂದಾವನ್ ಪವರ್ ಲಿಮಿಟೆಡ್ ಇವರಿಗೆ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 128 ಎನ್‌ಸಿಇ 2011, ಬೆಂಗಳೂರು, ದಿನಾಂಕ : 08-11-2011.**

ಮೆ: ಏಟ್ರಿಯಾ ಬೃಂದಾವನ್ ಪವರ್ ಲಿಮಿಟೆಡ್ ಇವರಿಗೆ ಮಂಡ್ಯಾ ಜಿಲ್ಲೆಯ ಪಾಂಡವಪುರ ತಾಲ್ಲೂಕು, ಚಿಕ್ಕಯರಹಳ್ಳಿ ಗ್ರಾಮ ಪ್ರದೇಶದಲ್ಲಿ ಕೆ.ಆರ್.ಎಸ್. ಅಣೆಕಟ್ಟು, ಉತ್ತರ ದಡದ ಹತ್ತಿರ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಹನುಮನ ಹಳ್ಳ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಕಂಡ ಶೆಡ್ಯೂಲ್ ಹಾಗೂ ಷರತ್ತಿಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

| Company | MHS | Location | MW | Weir Latitude | Weir Longitude | Power House Latitude | Power House Longitude | FRL (M) EL | TWL (M) EL | Design Head (M) | Design Disch-arge (Cum-ecs) |
|---|---|---|---|---|---|---|---|---|---|---|---|
| M/s. Atria Brindavan Power Ltd., | Hanu-mana-halla | Chikkayarahakki Village, Pandavapura Taluk, Mandya District | 4.00 | 12°25'50'' | 76°34'55'' | At the toe of the diversi-on weir | | 737 | 716 | 18 | 26.5 |

1 ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು

1(ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು, ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು, ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು (ಒಡಂಬಡಿಕೆಯನ್ನು ಕಡ್ಡಾಯವಾಗಿ ಕನ್ನಡದಲ್ಲಿಯೇ ಸಲ್ಲಿಸತಕ್ಕದ್ದು)

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

(ಈ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಮುಂತಾದ ಇಲಾಖೆಗಳಿಗೆ ಕ್ಲಿಯರೆನ್ಸ್‌ಗಾಗಿ ಪಡೆಯತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

2(ಅ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಅವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

(ಆ) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದು.

3. ಯೋಜನೆಯನ್ನು ಆದೇಶದ ದಿನಾಂಕದಿಂದ 3 ವರ್ಷದ (ಮೂರು ವರ್ಷ) ಅವಧಿಯೊಳಗೆ ಅನುಷ್ಠಾನಗೊಳಿಸತಕ್ಕದ್ದು.

4. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.
5. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.
6. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್/ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.
7. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.
8. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ ಅಥವಾ ಭಾದಕವಾದಲ್ಲಿ ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.
9. ವಿವರವಾದ ಯೋಜನಾ ವರದಿಯನ್ನು ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಅದನ್ನು ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.
10. ಸದರಿ ಯೋಜನೆಯನ್ನು ಅಭಿವೃದ್ಧಿದಾರರು ಕಾರ್ಯಗತ (Implement) ಮಾಡದಹೊರತು ವರ್ಗಾವಣೆ/ಮಾರಾಟಕ್ಕೆ ಅನುಮೋದನೆ ನೀಡಲಾಗುವುದಿಲ್ಲ.
11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2699 ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ: ಸುಜ್ಲಾನ್ ಇನ್‌ಫ್ರಾಸ್ಟ್ರಕ್ಚರ್ ಲಿಮಿಟೆಡ್, ಬೆಂಗಳೂರು. ಕಂಪನಿಗೆ ಹಂಚಿಕೆಯಾಗಿರುವ 15.60 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು 40.25 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :** 1)ಸರ್ಕಾರಿ ಆದೇಶ ಸಂಖ್ಯೆ: ಇಎನ್ 191 ಎನ್‌ಸಿಇ 2005, ದಿನಾಂಕ 19–08–2005

**2)** ಸರ್ಕಾರಿ ಆದೇಶ ಸಂಖ್ಯೆ: ಇಎನ್ 100 ಎನ್‌ಸಿಇ 2005, ದಿನಾಂಕ 30–08–2005

**3)** ಸರ್ಕಾರಿ ಆದೇಶ ಸಂಖ್ಯೆ: ಇಎನ್ 177 ಎನ್‌ಸಿಇ 2008, ದಿನಾಂಕ 30–08–2005

**4)** ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿಎಲ್/08/ಎಸ್‌ಐಎಲ್–ವಿಒಎಲ್–11/2008/952, ದಿನಾಂಕ 21–5–2008/18–6–2008.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ: ಸುಜ್ಲಾನ್ ಇನ್‌ಫ್ರಾಸ್ಟಕ್ಚರ್ ಲಿಮಿಟೆಡ್ ಕಂಪನಿಗೆ ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಒಟು 82.6 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು. ಇದರಲ್ಲಿ 15.60 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಬಳ್ಳಾರಿ ಜಿಲ್ಲೆಯ ಕುರುಗೋಡು ಮತ್ತು ಸಿಂದಿಗೆರೆ ಸೈಟ್‌ನಲ್ಲಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ: ಸುಜ್ಲಾನ್ ಡೆವಲಪರ್ಸ್ ಲಿಮಿಟೆಡ್ ಮತ್ತು ಮೆ: ಸುಜ್ಲಾನ್ ಡೆವಲಪರ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ರಾಜ್ಯದಲ್ಲಿ ಹಂಚಿಕೆಯಾಗಿರುವ ವಿವಿಧ ಪವನ ವಿದ್ಯುತ್ ಯೋಜನೆಗಳನ್ನು ಅನುಷ್ಠಾನ ಮಾಡಲು ಮೆ: ಸುಜ್ಲಾನ್ ಇನ್‌ಫ್ರಾಸ್ಟ್ರಕ್ಚರ್ ಲಿಮಿಟೆಡ್ ಎಂಬ ಕಂಪನಿಯ ಹೆಸರಿಗೆ ಬದಲಾವಣೆ ಮಾಡಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ: ಸುಜ್ಲಾನ್ ಇನ್‌ಫ್ರಾಸ್ಟಕ್ಚರ್ ಲಿಮಿಟೆಡ್ ಕಂಪನಿಗೆ ಅನುಷ್ಠಾನ ಮಾಡಲು ಬಳ್ಳಾರಿ ಜಿಲ್ಲೆಯ ಕುರುಗೋಡು ಮತ್ತು ಸಿಂದಿಗೆರೆ ಸೈಟ್‌ನಲ್ಲಿ ಅನುಮತಿಸಲಾದ 15.6 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು 40.25 ಮೆಗಾ ವ್ಯಾಟ್ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರು ಮೆ: ಸುಜ್ಲಾನ್ ಇನ್‌ಫ್ರಾಸ್ಟಕ್ಚರ್ ಲಿಮಿಟೆಡ್, ಕಂಪನಿಯು ಯೋಜನೆಯನ್ನು ದಿನಾಂಕ 31–3–2012ರ ಒಳಗೆ ಅನುಷ್ಠಾನಗೊಳಿಸುವುದು ಮತ್ತು ಪಿ.ಪಿ.ಎ. ಮೂಲಕ ಎಸ್ಕಾಂಗೆ ವಿದ್ಯುತ್ ಸರಬರಾಜು ಮಾಡುವುದರಿಂದ ಅವರಿಗೆ ಅನುಷ್ಠಾನ ಮಾಡಲು ಬಳ್ಳಾರಿ ಜಿಲ್ಲೆಯ ಕುರುಗೋಡು ಮತ್ತು ಸಿಂದಿಗೆರೆ ಸೈಟ್‌ನಲ್ಲಿ ಅನುಮತಿಸಲಾದ 40.25 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು 75.6 ಮೆಗಾ ವ್ಯಾಟ್‌ಗೆ ಹೆಚ್ಚಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 397 ಎನ್‌ಸಿಇ 2011, ಬೆಂಗಳೂರು, ದಿನಾಂಕ 22–10–2011.**

ಮೆ: ಸುಜ್ಲಾನ್ ಇನ್‌ಫ್ರಾಸ್ಟ್ರಕ್ಚರ್ ಲಿಮಿಟೆಡ್, ಬೆಂಗಳೂರು ಕಂಪನಿಗೆ ಬಳ್ಳಾರಿ ಜಿಲ್ಲೆಯ ಕುರುಗೋಡು ಮತ್ತು ಸಿಂದಿಗೆರೆ ಸೈಟ್‌ನಲ್ಲಿ ಅನುಮತಿಸಲಾದ 40.25 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು 75.6 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ದಿನಾಂಕ 31–3–2012ರ ಒಳಗೆ ಅನುಷ್ಠಾನಗೊಳಿಸುವ ಮತ್ತು ಉತ್ಪಾದನೆ ಆಗುವ ವಿದ್ಯುತ್ತನ್ನು ಪಿಪಿಎ ಮೂಲಕ ಎಸ್ಕಾಂಗಳಿಗೆ ಸರಬರಾಜು ಮಾಡುವ ಷರತ್ತಿಗೊಳಪಟ್ಟು ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ ವಿವರಗಳು ಕೆಳಗಿನಂತಿದೆ:–

| Geographical Area Details of the Project | Sanctioned capacity in MW | Enhancement Proposed in MW | No. of WTGs & rating in KW | Total Capacity including proposed enhancement in MW |
|---|---|---|---|---|
| The potential area identified as "A" & "B" are situated close by Kurugod and Sindigere villages. These two areas are of as open scrub & low altitude potentials. The proposed area is covered in the following Geographical Co-ordinates.<br>Latitude: 15°20'0'' - 15°25'0''N<br>Longitude: 76°47'30'' - 76°55'0''E<br>Ridge Peaks: 599, 592, 554, 580, 572m AMSL<br>Toposheet No.: 57 A/15 | 40.25 MW | 35.35 MW | 36 Nosx2100 KW | 75.6 MW |

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 2700

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ನ್ಯಾಯಾಂಗ ಅಧಿಕಾರಿಗಳಿಗೆ ನಿಲುವಂಗಿ ಭತ್ಯೆ (Robe Allowance) ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಲಾ 147 ಎಲ್‌ಎಸಿ 2009, ದಿನಾಂಕ : 13–10–2010.
2. ಟಿಪ್ಪಣಿ ಸಂಖ್ಯೆ : ಇಡಿ (ಎಲ್‌ಸಿ) 73/2011, ದಿನಾಂಕ : 29–07–2011.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ನ್ಯಾಯಾಂಗ ಇಲಾಖೆಗೆ ಸೇರಿದ ಅಧಿಕಾರಿಗಳಿಗೆ (ಜ್ಯುಡಿಷಿಯಲ್ ಆಫೀಸರ್ಸ್)ಗೆ ಮೂರು (3) ವರ್ಷಗಳಿಗೊಮ್ಮೆ ರೂ. 6000/–ರಂತೆ ನಿಲುವಂಗಿ ಭತ್ಯೆಯನ್ನು (Robe Allowance) ಪಡೆಯಲು ಅವಕಾಶ ಕಲ್ಪಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಶ್ರೀಮತಿ ಬಿ.ಎನ್.ಸುಜಾತ, ಕಾನೂನು ಕೋಶದ ಮುಖ್ಯಸ್ಥರು ಮತ್ತು ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಉನ್ನತ ಶಿಕ್ಷಣ ಮತ್ತು ಆರೋಗ್ಯ ಕುಟುಂಬ ಕಲ್ಯಾಣ ಇಲಾಖೆ–ಇವರು 2009–11ನೇ ಬ್ಲಾಕ್ ಅವಧಿಗೆ ನಿಲುವಂಗಿ ಭತ್ಯೆಯನ್ನು ಮಂಜೂರು ಮಾಡಲು ಕೋರಿದ್ದಾರೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 89 ಸಅಸೇ 2010, ಬೆಂಗಳೂರು, ದಿನಾಂಕ : 18–11–2011**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ನಿಯೋಜನೆ ಮೇರೆಗೆ ಕಾರ್ಯನಿರ್ವಹಿಸುತ್ತಿರುವ ಶ್ರೀಮತಿ ಬಿ. ಎನ್. ಸುಜಾತ, ಕಾನೂನು ಕೋಶದ ಮುಖ್ಯಸ್ಥರು ಮತ್ತು ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ, ಉನ್ನತ ಶಿಕ್ಷಣ ಮತ್ತು ಆರೋಗ್ಯ ಕುಟುಂಬ ಕಲ್ಯಾಣ ಇಲಾಖೆ–ಇವರು 2009–11ನೇ ಬ್ಲಾಕ್ ಅವಧಿಗೆ ರೂ. 6000/– (ರೂಪಾಯಿ ಆರು ಸಾವಿರಗಳು ಮಾತ್ರ) ನಿಲುವಂಗಿ ಭತ್ಯೆಯನ್ನು (Robe Allowance) ಮಂಜೂರು ಮಾಡಲಾಗಿದೆ.

ಈ ವೆಚ್ಚವನ್ನು ಸಚಿವಾಲಯಕ್ಕೆ ಸಂಬಂಧಿಸಿದ Salary Head-Other Allowances ನಿಂದ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

ಪಿ.ಆರ್. 2787

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಹೆಚ್. ಗಂಗಯ್ಯ, ಹಿಂದಿನ ನಿರ್ದೇಶಕರು, ಸರ್ಕಾರಿ ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ ಪ್ರಸ್ತುತ ವಿಶೇಷಾಧಿಕಾರಿ, ಶಿಕ್ಷಣ ಇಲಾಖೆ (ನ್ಯಾಯಾಲಯದ ಪ್ರಕರಣಗಳು) ಇವರ ವಿರುದ್ಧ ಲೋಕಾಯುಕ್ತ ವಿಚಾರಣೆಯ ಅಂತಿಮ ಆದೇಶ ಕುರಿತು.

**ಓದಲಾಗಿದೆ :**

1. ಹೆಚ್ಚುವರಿ ನಿಬಂಧಕರು, (ವಿಚಾರಣೆಗಳು–5), ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರ ಪತ್ರ ಸಂಖ್ಯೆ: ಕಂಪ್ಲೇಂಟ್/ಲೋಕ್/ಬಿಸಿಡಿ–45/98–99 (ಎಆರ್‌ಇ–5), ದಿನಾಂಕ : 28–11–2006.
2. ಲೋಕಾಯುಕ್ತ ವಿಚಾರಣಾ ವರದಿ ಸಂಖ್ಯೆ : ಲೋಕ್/ಎಆರ್‌ಇ/4/14–ಎ/ಇಎನ್‌ಕ್ಯೂ–31/2007, ದಿನಾಂಕ: 31–05–2010.
3. ಮಾನ್ಯ ಲೋಕಾಯುಕ್ತರ ಪತ್ರ ಸಂಖ್ಯೆ : ಲೋಕ್/ಎಆರ್‌ಇ–4/ಇಎನ್‌ಕ್ಯೂ–31/2007, ದಿನಾಂಕ : 19–06–2010.
4. ನೋಟಿಸ್ ಸಂಖ್ಯೆ : ಸಿಆಸುಇ 449 ಎಸ್‌ಇಎನ್ 2006, ದಿನಾಂಕ : 08–07–2010.
5. ದಿನಾಂಕ : 19–07–2010ರ ಶ್ರೀ ಹೆಚ್. ಗಂಗಯ್ಯ, ಹಿಂದಿನ ನಿರ್ದೇಶಕರು, ಮುದ್ರಣ ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಇವರ ಹೇಳಿಕೆ.

**ಪ್ರಸ್ತಾವನೆ :**

ಶ್ರೀ ಹೆಚ್. ಗಂಗಯ್ಯ, ವಿಶೇಷಾಧಿಕಾರಿ (ನ್ಯಾಯಾಲಯದ ಪ್ರಕರಣಗಳು), ಶಿಕ್ಷಣ ಇಲಾಖೆ ಇವರು ಮುದ್ರಣ, ಲೇಖನ ಸಾಮಗ್ರಿಗಳು ಮತ್ತು ಪ್ರಕಟಣೆಗಳ ಇಲಾಖೆ, ಇಲ್ಲಿ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಶ್ರೀ ಡಿ. ಮೂಡ್ಲೇಗೌಡ, ದ್ವಿತೀಯ ದರ್ಜೆ ಸಹಾಯಕ ಇವರ ವಿರುದ್ಧ ಕೋಟಾ ಇಂಡೆಂಟ್ ಫಾರಂ ನೀಡಿರುವ ಆರೋಪದ ಮೇಲೆ ಅವರನ್ನು ಅಮಾನತ್ತಿನಲ್ಲಿಟ್ಟಿದ್ದರೂ ಅವರ ವಿರುದ್ಧ ಯಾವುದೇ ವಿಚಾರಣೆ ನಡೆಸದೇ ಮತ್ತು ಅಕ್ರಮ ಮೊತ್ತ ರೂ. 18,630/–ನ್ನು ವಸೂಲಿ ಮಾಡದೇ ಕರ್ತವ್ಯಕ್ಕೆ ತೆಗೆದುಕೊಂಡಿರುತ್ತಾರೆಂದು ; ಶ್ರೀ ಬಿ.ಎನ್. ಕುಮಾರಸ್ವಾಮಿ, ದ್ವಿತೀಯ ದರ್ಜೆ ಸಹಾಯಕರು ಇವರ ವಿರುದ್ಧ ಅಕ್ರಮ ಕಾಗದ ಬಿಡುಗಡೆಗೆ ಸಂಬಂಧಿಸಿದಂತೆ ಅಮಾನತ್ತಿನಲ್ಲಿಟ್ಟಿದ್ದರೂ ವಿಚಾರಣೆ ಮಾಡದೇ ಕರ್ತವ್ಯಕ್ಕೆ ನೇಮಿಸಿ ಅವರಿಂದ ನಷ್ಟವಾದ ರೂ. 77,970/–ನ್ನು ವಸೂಲಿ ಮಾಡದೇ ಇರುವುದು ; ಶ್ರೀ ಎಂ.ಎನ್. ಸತ್ಯಕುಮಾರ್, ಅಧೀಕ್ಷಕರು, ಇವರನ್ನು ಕರ್ತವ್ಯ ನಿರ್ಲಕ್ಷ ತೋರಿದ ಕಾರಣದಿಂದ ಅಮಾನತ್ತಿನಲ್ಲಿಟ್ಟಿದ್ದರೂ ಪುನರ್ ನೇಮಕ ಮಾಡಿದ್ದು, ಎರಡು ವರೆ ವರ್ಷಗಳ ನಂತರದ ದೋಷಾರೋಪಣೆ ಹೊರಡಿಸಿದ್ದಾರೆಂದು, ಅವರಿಂದ ವಸೂಲಿ ಮಾಡಲಾದ ರೂ. 23,606/– ಮೊತ್ತವನ್ನು ನಂತರ ಅವರಿಗೆ ಪಾವತಿಸಿದ್ದಾರೆಂದು ಆರೋಪಿಸಿ ಶ್ರೀ ರುದ್ರಮುನಿ ಶೆಟ್ಟಿ ನಿವೃತ್ತ ಸಹಾಯಕ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಇವರು ಸಲ್ಲಿಸಿರುವ ದೂರಿನ ಮೇರೆಗೆ ತನಿಖೆಯನ್ನು ನಡೆಸಿದ ಮಾನ್ಯ ಲೋಕಾಯುಕ್ತರವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ, ಲೋಕಾಯುಕ್ತ ಕಾಯಿದೆ ಕಲಂ 12 (3)ರಡಿಯ ತಮ್ಮ ವರದಿಯಲ್ಲಿ ಶ್ರೀ ಹೆಚ್.ಗಂಗಯ್ಯ ಇವರ ವಿರುದ್ಧ ಮಾಡಲಾದ ಆರೋಪವು ಮೇಲ್ನೋಟಕ್ಕೆ ಸತ್ಯವೆಂದು ಕಂಡುಬರುತ್ತದೆಂದು ತಿಳಿಸಿ ಅವರ ವಿರುದ್ಧ ಪೂರ್ಣ ಪ್ರಮಾಣದ ತನಿಖೆಗಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 14–ಎ ರಡಿ ತಮಗೆ ವಹಿಸುವಂತೆ ಶಿಫಾರಸ್ಸು ಮಾಡಲಾಗಿದೆ. ಮಾನ್ಯ ಲೋಕಾಯುಕ್ತರ ಶಿಫಾರಸ್ಸನ್ನು ಪರಿಶೀಲಿಸಿದ ಸರ್ಕಾರವು ಅದನ್ನು ಒಪ್ಪಿಕೊಂಡು ದಿನಾಂಕ : 17–05–2007ರ ಆದೇಶದಲ್ಲಿ ಪ್ರಕರಣವನ್ನು ಲೋಕಾಯುಕ್ತದ ತನಿಖೆಗೆ ಒಪ್ಪಿಸಿತ್ತು. ಮೇಲೆ (2)ರಲ್ಲಿ ಓದಲಾದ ಆದೇಶ ದಿನಾಂಕ : 31–05–2010ರಲ್ಲಿ ವಿಚಾರಣಾಧಿಕಾರಿಯವರು ಮಾನ್ಯ ಲೋಕಾಯುಕ್ತರಿಗೆ ಅಂತಿಮವಾಗಿ ಈ ಕೆಳಕಂಡಂತೆ ವರದಿಯನ್ನು ಸಲ್ಲಿಸಿರುತ್ತಾರೆ.

" ಈ ಪ್ರಕರಣದ ಮೂವರು ಆಪಾದಿತರ ಪೈಕಿ ಇಬ್ಬರಿಂದ ಹಣ ವಸೂಲು ಮಾಡಲು ಮತ್ತು ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಕ್ರಮ ಜರುಗಿಸಬೇಕಾಗಿತ್ತು. ಆದರೆ ವಿಚಾರಣಾದಿಕಾರಿಗಳ ಮುಂದೆ ಮಂಡಿಸಲಾದ ಮಾಹಿತಿಯಂತೆ ವಿಚಾರಣೆಯನ್ನು ಸರಿಯಾದ ಸಮಯದಲ್ಲಿ ಮಾಡಿರುವುದಿಲ್ಲ. ಆರೋಪಿತ ಅಧಿಕಾರಿಯವರು ವಿಚಾರಣೆ ಸಂದರ್ಭದಲ್ಲಿ ಇದರಲ್ಲಿ ಒಳಗೊಂಡಿರುವ ಅಧಿಕಾರಿಗಳ ಪೈಕಿ ಇಬ್ಬರ ಅಮಾನತ್ತಿಗೆ ಅವರು ಶಿಫಾರಸ್ಸು ಮಾಡಿರುವುದನ್ನು ಉಲ್ಲೇಖಿಸಿರುತ್ತಾರೆ ಮತ್ತು ಆ ಸಂದರ್ಭದಲ್ಲಿ ಅವರು ಕೇವಲ ಜಂಟಿ ನಿರ್ದೇಶಕರಾಗಿದ್ದು, 1996ರ ಜನವರಿಯಲ್ಲಿ ನಿರ್ದೇಶಕರ ಹುದ್ದೆಗೆ ಹೊಂದಿದ್ದಾಗಿ ತಿಳಿಸಿರುತ್ತಾರೆ. ಆದುದರಿಂದ ಈ ಪ್ರಕರಣದಲ್ಲಿ ಇವರು ನಿರ್ದೇಶಕರಾಗಿ ಬಡ್ತಿ ಹೊಂದಿದ ಮೇಲೆ ಪ್ರಕರಣದಲ್ಲಿ ಉದ್ದೇಶ ಪೂರ್ವಕವಾಗಿ ಆರೋಪಿತ ನೌಕರರ ವಿರುದ್ಧ ಕ್ರಮ ಜರುಗಿಸಲಿಲ್ಲವೇ ಎಂಬುದನ್ನು ಪರಿಶೀಲಿಸಲಾಗಿದೆ. ಶ್ರೀ ಸತ್ಯಕುಮಾರ್, ಆರೋಪಿತ ನೌಕರ ಇವರ ಡಿ.ಸಿ.ಆರ್.ಜಿ. ಯಿಂದ ರೂ. 23,616/–ನ್ನು ವಸೂಲು ಮಾಡಲಾಗಿದೆ. ಇದನ್ನು ಆರೋಪಿತ ನೌಕರರು ಕೆ.ಎ.ಟಿ.ಯಲ್ಲಿ ಪ್ರಶ್ನಿಸಲಾಗಿ 3 ತಿಂಗಳೊಳಗಾಗಿ ವಿಚಾರಣೆ ಮುಗಿಸುವಂತೆ ಇಲ್ಲವಾದಲ್ಲಿ ತಡೆಹಿಡಿದ ಮೊತ್ತ ರೂ. 23616/–ನ್ನು ಮರು ಪಾವತಿಸುವಂತೆ ಕೆ.ಎ.ಟಿ. ಆದೇಶಿಸಿತ್ತು. ದಾಖಲೆಗಳಲ್ಲಿ ಸ್ಪಷ್ಟವಾಗುವಂತೆ ವಿಚಾರಣೆಯನ್ನು 3 ತಿಂಗಳೊಳಗೆ ಪ್ರಾರಂಬಿಸಿರುವುದಿಲ್ಲ ಆದುದರಿಂದ ಹಣವನ್ನು ಮರು ಪಾವತಿಸಲಾಯಿತು ಮತ್ತು ಆರೋಪಿತ ನೌಕರರ ಅಕಾಲ ಮರಣದಿಂದಾಗಿ ವಿಚಾರಣೆಯನ್ನು ಕೈಬಿಡಲಾಯಿತು. ವಿಚಾರಣೆಯನ್ನು ನಿಗದಿತ ಸಮಯದೊಳಗೆ ಮಾಡಲು ದಾಖಲೆಗಳು ಲಭ್ಯವಿರಲಿಲ್ಲವೆಂದು ಆರೋಪಿತ ಅಧಿಕಾರಿಯವರು ತಿಳಿಸಿರುತ್ತಾರೆ. ಒಂದು ವೇಳೆ ದಾಖಲೆಗಳು ಲಭ್ಯವಿಲ್ಲದಿದ್ದಲ್ಲಿ ನಿಗದಿತ ಸಮಯವನ್ನು ವಿಸ್ತರಿಸುವಂತೆ ಕೋರಿ ಮಾನ್ಯ ಕೆ.ಎ.ಟಿ.ಗೆ ಅರ್ಜಿ ಸಲ್ಲಿಸಬಹುದ್ದಾಗಿತ್ತು. ಆದರೆ ಆರೋಪಿತ ಅಧಿಕಾರಿಯವರು ಅಂತಹ ಪ್ರಯತ್ನವನ್ನು ಮಾಡಿರುವುದಿಲ್ಲ. ಉಳಿದಂತೆ ಇನ್ನಿಬ್ಬರು ಆರೋಪಿತ ಅಧಿಕಾರಿಗಳಿಂದ ಸರ್ಕಾರಕ್ಕೆ ಬರಬೇಕಾದ ಮೊತ್ತವನ್ನು ವಸೂಲು ಮಾಡಿದ್ದರೂ ಈ ಕ್ರಮವನ್ನು ಅವರ ವಿರುದ್ಧ ಲೋಕಾಯುಕ್ತದಲ್ಲಿ ದೂರು ದಾಖಲಾದ ನಂತರ ಜರುಗಿಸಲಾಗಿದೆ. ಆರೋಪಿತ ಅಧಿಕಾರಿಯವರು ನಿರ್ದೇಶಕರಾಗಿ ಕಾರ್ಯಭಾರ ವಹಿಸಿದ ನಂತರ ಚುನಾವಣೆಗಳು ಘೋಷಣೆಯಾಗಿ ಅವರು ಮತಪತ್ರಗಳ ಮುದ್ರಣ ಇತ್ಯಾದಿ ಚುನಾವಣಾ ಸಂಬಂಧಿತ ಕಾರ್ಯದಲ್ಲಿ ಕಾರ್ಯನಿರತರಾಗಿದ್ದರಿಂದ ಮತ್ತು ಶ್ರೀ ಸತ್ಯಕುಮಾರ್ ಇವರ ಕಡತ ಲಭ್ಯವಿಲ್ಲದೆ ಇದ್ದುದರಿಂದ ಈ ವಿಳಂಬವಾಗಿದೆ ಎಂದು ಹೇಳಿರುವುದನ್ನು ಒಪ್ಪಲು

ಸಾಧ್ಯವಿಲ್ಲ. ಏಕೆಂದರೆ ಮೊದಲು ಇವರೇ ಆರೋಪಿತ ಅಧಿಕಾರಿಗಳ ವಿರುದ್ಧ ಕ್ರಮ ಜರುಗಿಸಲು ಸೂಚಿಸಿದ್ದು, ನಿರ್ದೇಶಕರಾದ ನಂತರ ಆದೇಶ ಉತ್ಸಾಹ ಉಳಿಸಿಕೊಂಡಿರುವುದಿಲ್ಲ. ಆರೋಪಿತ ಅಧಿಕಾರಿಗಳ ವಿರುದ್ಧ ಶಿಸ್ತುಕ್ರಮ ಜರುಗಿಸಲು ಹಿಂದಿನ ಉತ್ಸಾಹ ಹಾಗೂ ಗಡಸುತನ ಉಳಿಸಿಕೊಳ್ಳಬಹುದಿತ್ತು. ಆದರೆ ಆರೋಪಿತ ಅಧಿಕಾರಿಯವರು ಹಾಗೆ ಮಾಡಿರುವುದಿಲ್ಲ. ಅದೇ ರೀತಿ ಶ್ರೀ ಸತ್ಯಕುಮಾರ್ ಅವರ ಪ್ರಕರಣದಲ್ಲಿ ಕೆ.ಎ.ಟಿ. ಆದೇಶದ ವಿಸ್ತರಣೆಗೆ ಯಾವುದೇ ಕ್ರಮ ಜರುಗಿಸದೇ ಇರುವುದು ಸುಸ್ಪಷ್ಟವಾಗಿದೆ ಮತ್ತು ಅವರು ತಮ್ಮ ಕರ್ತವ್ಯ ನಿರ್ವಹಿಸುವಲ್ಲಿ ನಿರ್ಲಕ್ಷತೆ ವಹಿಸಿರುವುದು ಕಂಡು ಬರುತ್ತದೆ. ಆದುದರಿಂದ ಶ್ರೀ ಸತ್ಯಕುಮಾರ್ ಇವರ ಪ್ರಕರಣದ ಆರೋಪ ಭಾಗಶಃ ಸಾಬೀತಾಗಿರುತ್ತದೆ."

ವಿಚಾರಣಾ ವರದಿಯ ಆಧಾರದ ಅನ್ವಯ ಮೇಲೆ (3)ರಲ್ಲಿ ಓದಲಾದ ಮಾನ್ಯ ಲೋಕಾಯುಕ್ತರು ದಿನಾಂಕ : 19–06–2010ರ ಪತ್ರದಲ್ಲಿ ಆರೋಪಗಳು ಸಾಬೀತಾಗಿರುವುದರಿಂದ ಆರೋಪಿತ ಅಧಿಕಾರಿಯಾದ ಶ್ರೀ ಹೆಚ್.ಗಂಗಯ್ಯ, ಹಿಂದಿನ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಪ್ರಸ್ತುತ ವಿಶೇಷಾಧಿಕಾರಿ (ನ್ಯಾಯಾಲಯದ ಪ್ರಕರಣಗಳು) ಶಿಕ್ಷಣ ಇಲಾಖೆ ಇವರಿಗೆ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮೊಟಕುಗೊಳಿಸುವ ದಂಡನೆಯನ್ನು ವಿಧಿಸಲು ಶಿಫಾರಸ್ಸು ಮಾಡಲಾಗಿದೆ.

ನಂತರ ಮಾನ್ಯ ಲೋಕಾಯುಕ್ತರ ವರದಿಯ ಅನ್ವಯ ಆರೋಪಿತ ಅಧಿಕಾರಿಯವರಿಗೆ ಮೇಲೆ ಓದಲಾದ (4)ರ ದಿನಾಂಕ : 08–07–2010 ರಂದು ಕಾರಣ ಕೇಳುವ ನೋಟೀಸ್ ಜಾರಿ ಮಾಡಲಾಗಿತ್ತು. ಮೇಲೆ ಓದಲಾದ (5)ರ ದಿನಾಂಕ : 19–07–2010ರಲ್ಲಿ ಆರೋಪಿತ ಅಧಿಕಾರಿಯಾದ ಶ್ರೀ ಹೆಚ್. ಗಂಗಯ್ಯ, ಹಿಂದಿನ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಇವರು ತಮ್ಮ ಹೇಳಿಕೆಗಳನ್ನು ಸಲ್ಲಿಸಿರುತ್ತಾರೆ ಅವು ಈ ಕೆಳಕಂಡಂತಿದೆ.

"ವಿಚಾರಣಾಧಿಕಾರಿಗಳು ಯಾವ ಆರೋಪಗಳು ಸಾಬೀತಾಗಿದೆಂದು ಸ್ಪಷ್ಟವಾಗಿ ಹೇಳಿರುವುದಿಲ್ಲ, ಶ್ರೀ ಸತ್ಯಕುಮಾರ್ ಇವರ ಪ್ರಕರಣದಲ್ಲಿ ಕೆ.ಎ.ಟಿ. ಕಾಲಮಿತಿ ವಿಸ್ತರಿಸಲು ಅವರು ಕ್ರಮ ಜರುಗಿಸಿಲ್ಲವಾದ್ದರಿಂದ ಆರೋಪವು ಸಾಬೀತಾಗಿದೆ ಎಂದು ಪರಿಗಣಿಸಲು ಸರಿಯಿಲ್ಲ ಏಕೆಂದರೆ ಅವರ ವಿರುದ್ಧ ಮಾಡಿರುವ ಆರೋಪದಲ್ಲಿ ಈ ಅಂಶವನ್ನು ಸೇರಿಸಿರುವುದಿಲ್ಲ. ಮತ್ತು ವಿಚಾರಣೆಯ ಸಂದರ್ಭದಲ್ಲೂ ಸಹ ಪ್ರಸ್ತಾಪಿಸಿರುವುದಿಲ್ಲ ಆದುದರಿಂದ ಈ ಬಗ್ಗೆ ವಿವರಣೆ ನೀಡಲು ಅವಕಾಶ ನೀಡದೇ ಅದನ್ನು ನೇರವಾಗಿ ವಿಚಾರಣಾ ವರದಿಗೆ ಸೇರಿಸಿರುವುದು ಕಾನೂನು ಬಾಹಿರ ಮತ್ತು ಲೋಕಾಯುಕ್ತರು ಇದನ್ನು ಆಧರಿಸಿ ದಂಡನಾ ಪರಿಮಾಣ ಶಿಫಾರಸ್ಸು ಮಾಡಿರುವುದು ನ್ಯಾಯಬಾಹಿರ.

ವಾಸ್ತವಾಗಿ ವಿಚಾರಣೆ ನಡೆಸಿದ ವಿಚಾರಣೆ ಅಧಿಕಾರಿಯವರು ವರ್ಗಾವಣೆಯಾಗಿದ್ದು, ನಂತರ ಬಂದ ವಿಚಾರಣಾಧಿಕಾರಿ ಕೇವಲ ದಾಖಲೆಗಳನ್ನು ಆಧರಿಸಿ ವರದಿ ಸಿದ್ದಪಡಿಸಿದ್ದು, ಕೆ.ಎ.ಟಿ.ಗೆ ಅವಧಿ ವಿಸ್ತರಣೆಗಾಗಿ ಕ್ರಮ ಜರುಗಿಸಿಲ್ಲವೆಂಬ ಅವರ ಕಲ್ಪನೆಯಾಗಿದ್ದು, ಅದನ್ನು ಸಮರ್ಥಿಸಿಕೊಳ್ಳಲು ಅವಕಾಶ ನೀಡದೇ ಇರುವುದರಿಂದ ಈ ನಿರ್ಧಾರ ಕಾನೂನಿನ ಎದುರು ನಿಲ್ಲುವುದಿಲ್ಲ ಆದುದರಿಂದ ಈ ಪ್ರಕರಣವನ್ನು ಹಿಂದಿನ ವಿಚಾರಣಾಧಿಕಾರಿಗಳಿಗೆ ನೀಡಬೇಕಾಗಿತ್ತು. ವಿಚಾರಣೆ ನಡೆಸುವಲ್ಲಿ ಆದ ವಿಳಂಬದ ಬಗ್ಗೆ ವಿವರಿಸುತ್ತಾ ಅವರು ಜಂಟಿ ನಿರ್ದೇಶಕನ್ನು ವಿಚಾರಣಾಧಿಕಾರಿಯಾಗಿ ನೇಮಿಸಿದ್ದು, ವಿಚಾರಣೆ ನಡೆಯುತ್ತಿದ್ದಾಗ ಲೋಕಾಯುಕ್ತ ಅಧಿಕಾರಿಗಳು ಎಲ್ಲಾ ಕಡತಗಳನ್ನು ತನಿಖೆಗಾಗಿ ತೆಗೆದುಕೊಂಡು ಹೋಗಿದ್ದರಿಂದ ಅವರ ಸಿಬ್ಬಂದಿಯನ್ನು ಲೋಕಾಯುಕ್ತ ಕಛೇರಿಗೆ ಕಳುಹಿಸಿ ಅಗತ್ಯ ಮಾಹಿತಿ ದಾಖಲೆ ಪ್ರತಿ ಪಡೆದು ಶ್ರೀ ಸತ್ಯಕುಮಾರ್ ಇವರಿಂದ ಹಣ ವಸೂಲು ಮಾಡಲಾಯಿತು. ಈ ಪ್ರಕರಣದಲ್ಲಿ ಸಂಬಂಧಿಸಿದ ಕಡತ ಕಾಣೆಯಾದ ಬಗ್ಗೆ ಸಂಬಂಧಿಸಿದ ವಿಚಾರಣಾಧಿಕಾರಿಯವರನ್ನು ಪ್ರಶ್ನಿಸಬೇಕಾಗಿದೆ. ಇವರು ಇಲಾಖಾ ಮುಖ್ಯಸ್ಥರಾಗಿದ್ದು, ಅವರ ಅಧೀನ ಸಿಬ್ಬಂದಿ ಕಡತವನ್ನು ಸರಿಯಾಗಿ ಇಟ್ಟುಕೊಂಡಿಲ್ಲದೆ ಇದ್ದಲ್ಲಿ ಅದಕ್ಕೆ ಅವರ ಹೊಣೆ ಎಂದು ಪರಿಗಣಿಸುವುದು ಸರಿಯಲ್ಲ. ಆದುದರಿಂದ ಅವರಿಗೆ ದಂಡನೆ ವಿಧಿಸಲು ಶಿಫಾರಸ್ಸು ಮಾಡಿರುವುದು ಸರಿಯಾದ ನಿರ್ಧಾರವಲ್ಲ ವಿಚಾರಣಾಧಿಕಾರಿಯವರು ಆರೋಪ ಸಾಬೀತಾಗಿದೆ ಎಂದು ಹೇಳುವಾಗ ಹೊಸ ಸಂಗತಿಗಳನ್ನು ಸೇರಿಸದೇ ತಮ್ಮ ವಿರುದ್ಧದ ಆರೋಪಗಳಿಗೆ ಮಾತ್ರ ಸೀಮಿತಗೊಳಿಸಬೇಕು ತಮ್ಮ ಪ್ರಕರಣದಲ್ಲಿ ಹಾಗೆ ಮಾಡಿಲ್ಲದೇ ಇರುವುದರಿಂದ ವರದಿಯನ್ನು ತಿರಸ್ಕರಿಸಿ ತಮ್ಮನ್ನು ದೋಷಮುಕ್ತರನ್ನಾಗಿಸಬೇಕು ಎಂದು ಆರೋಪಿತ ಅಧಿಕಾರಿಯವರು ತಮ್ಮ ಹೇಳಿಕೆಯಲ್ಲಿ ತಿಳಿಸಿರುತ್ತಾರೆ."

ಮೇಲ್ಕಂಡ ಆರೋಪಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ವಿಚಾರಣಾ ವರದಿಯಲ್ಲಿ ಹಲವು ನ್ಯೂನ್ಯತೆಗಳು ಕಂಡುಬಂದಿದ್ದು, ಅದರಲ್ಲಿನ ಪ್ರಮುಖ ಅಂಶಗಳೆಮದರೆ ಮೂವರು ನೌಕರರಿಂದ ಹಣ ವಸೂಲಿ ಮಡಬೇಕಾಗಿತ್ತೆಂದು ಒಂದು ಅಂಶ ಶ್ರೀ ಕುಮಾರಸ್ವಾಮಿ ಮತ್ತು ಶ್ರೀ ಮೂಡಲೇಗೌಡ, ಇವರಿಂದ ಬರತಕ್ಕ ಹಣ ವಸೂಲಿಯಾಗಿದ್ದನ್ನು ವಿಚಾರಣಾಧಿಕಾರಿಯವರು ಒಪ್ಪಿರುತ್ತಾರೆ. ಆದರೆ ಶ್ರೀ ಸತ್ಯಕುಮಾರ್ ಅವರಿಗೆ ಸಂಬಂಧಿಸಿದಂತೆ ಅವರಿಗೆ ಹಣ ವಸೂಲಿ ಮಾಡಲಾಗಿದ್ದು, ನಂತರ ಕೆ.ಎ.ಟಿ. ಆದೇಶದ ಪ್ರಕಾರ ಹಣವನ್ನು ಹಿಂದಿರುಗಿಸಲಾಗಿದೆ. ಶ್ರೀ ಸತ್ಯಕುಮಾರ್ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಮೂರು ತಿಂಗಳೊಳಗಾಗಿ ಪೂರ್ಣಗೊಳಿಸಬೇಕು ಇಲ್ಲದಿದ್ದಲ್ಲಿ ವಿಚಾರಣೆ ಪರಿಣಾಮಕ್ಕೆ ನಿರೀಕ್ಷಿಸದೇ ಸದರಿ ನೌಕರರ ನಿವೃತ್ತಿ ಸೌಲಭ್ಯಗಳನ್ನು ಬಿಡುಗಡೆ ಮಡಬೇಕೆಂದು ಕೆ.ಎ.ಟಿ ಆದೇಶದ ಪ್ರಕಾರ ಆಪಾದಿತ ಅಧಿಕಾರಿಯು ನಿಗದಿತ ಅವಧಿಯನ್ನು ಪೂರ್ಣಗೊಳಿಸಬೇಕಾಗಿತ್ತೆಂದು ವಿಚಾರಣಾಧಿಕಾರಿಯವರು ತಿಳಿಸಿರುತ್ತಾರೆ. ಆಪಾದಿತ ಅಧಿಕಾರಿಯು ಇಲಾಖಾ ವಿಚಾರಣೆ ಪೂರ್ಣಗೊಳಿಸಲು ವಿಫಲವಾಗಿದ್ದರಿಂದ ಶ್ರೀ ಸತ್ಯಕುಮಾರ್ ಇವರಿಗೆ ನಿವೃತ್ತ ಸೌಲಭ್ಯಗಳನ್ನು ಬಿಡುಗಡೆ ಮಾಡಬೇಕಾಯಿತೆಂದು ಮತ್ತು ಅವರಿಂದ ರೂ. 23,616/–ಗಳನ್ನು ವಸೂಲಿ ಮಾಡಲು ಸಾಧ್ಯವಾಗಿಲ್ಲವೆಂಬುದು ವಿಚಾರಣಾಧಿಕಾರಿಗಳ ಅಭಿಪ್ರಾಯವಾಗಿದೆ ಇದರಿಂದ ಆಪಾದಿತ ಅಧಿಕಾರಿಯು ತಮ್ಮ ಕರ್ತವ್ಯ ನಿರ್ವಹಣೆಯಲ್ಲಿ ನಿರ್ಲಕ್ಷತೆ ತೋರಿದ್ದಾರೆಂದು ಭಾಗಶಃ ಸಾಬೀತಾಗಿದೆ ಎಂದು ವಿಚಾರಣಾಧಿಕಾರಿಯವರು ನಿರ್ಣಯಕ್ಕೆ ಬಂದಿರುತ್ತಾರೆ. ಈ ಬಗ್ಗೆ Ramdas Singh v/s Union of India (1990) 13ATC 136 (JB) ಪ್ರಕರಣದಲ್ಲಿ CATAUಯು ಈ ಕೆಳಕಂಡಂತೆ ತೀರ್ಮಾನಿಸಿರುವುದನ್ನು ಇಲ್ಲಿ ಉಲ್ಲೇಖಿಸಲಾಗಿದೆ.

**" Partly proved means not proved, Either it should be proved or not proved- no middle path".**

ಆದ್ದರಿಂದ ಆರೋಪಿತ ಅಧಿಕಾರಿಯ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿಲ್ಲವೆಂದು ಭಾವಿಸಬೇಕಾಗುತ್ತದೆ. ಇದರಿಂದಾಗಿ ಮಾನ್ಯ ಲೋಕಾಯುಕ್ತರ ಶಿಫಾರಸ್ಸನ್ನು ಜಾರಿಗೊಳಿಸಲು ಸಾಧ್ಯವಾಗುವುದಿಲ್ಲ ಆದ್ದರಿಂದ ಲೋಕಾಯುಕ್ತರ ಶಿಫಾರಸ್ಸಿನಂತೆ ಶಿಕ್ಷೆ ವಿಧಿಸುವ ಬದಲು ಶ್ರೀ ಹೆಚ್.ಗಂಗಯ್ಯ, ಹಿಂದಿನ ನಿರ್ದೇಶಕರು, ಮುದ್ರಣ ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಪ್ರಸ್ತುತ ವಿಶೇಷಾಧಿಕಾರಿ (ನ್ಯಾಯಾಲಯದ ಪ್ರಕರಣಗಳು) ಶಿಕ್ಷಣ ಇಲಾಖೆ, ಇವರಿಗೆ ಆಡಳಿತಾತ್ಮಕ ಎಚ್ಚರಿಕೆಯನ್ನು ನೀಡಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 449 ಎಸ್‌ಇಎನ್ 2006, ಬೆಂಗಳೂರು, ದಿನಾಂಕ : 08–12–2011**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ಹೆಚ್. ಗಂಗಯ್ಯ, ಹಿಂದಿನ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಪ್ರಸ್ತುತ ವಿಶೇಷಾಧಿಕಾರಿ (ನ್ಯಾಯಾಲಯದ ಪ್ರಕರಣಗಳು) ಶಿಕ್ಷಣ ಇಲಾಖೆ ಇವರನ್ನು ಈ ಪ್ರಕರಣದಲ್ಲಿ ಅವರ ವಿರುದ್ಧ ಮಾಡಲಾದ ಆರೋಪಗಳಿಂದ ಮುಕ್ತರನ್ನಾಗಿಸಿ, ಇನ್ನು ಮುಂದೆ ಇಂತಹ ಪ್ರಕರಣಗಳು ಮರುಕಳಿಸದಂತೆ ಜಾಗರೂಕರಾಗಿರಲು ಈ ಮೂಲಕ ಆಡಳಿತಾತ್ಮಕ ಎಚ್ಚರಿಕೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2788 ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀಮತಿ ಜುಡಿತ್ ಓಲ್ಗ ಮಾರ್ಗರೆಟ್ ಕ್ರಾಸ್ಟ, ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಜೆಎಂಎಫ್‌ಸಿ ನ್ಯಾಯಾಲಯ, ಮಂಗಳೂರು ಇವರಿಗೆ ಆಯ್ಕೆಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ : ಲಾ 97 ಪಿಪಿಇ 97, ದಿನಾಂಕ : 29–01–1998.
2. ಸರ್ಕಾರದ ಅಧಿಸೂಚನೆ ಸಂಖ್ಯೆ : ಲಾ 123 ಪಿಪಿಇ 2001(ಬಿ), ದಿನಾಂಕ : 25–08–2001.
3. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ಸಿಶಾ : 1/198(7)/2007–08, ದಿನಾಂಕ : 18–07–2009.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ : 29–01–1998 ಸರ್ಕಾರದ ಅಧಿಸೂಚನೆಯನ್ವಯ ಶ್ರೀಮತಿ ಜುಡಿತ್ ಓಲ್ಗ ಮಾರ್ಗರೆಟ್ ಕ್ರಾಸ್ಟ, ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಜೆಎಂಎಫ್‌ಸಿ ನ್ಯಾಯಾಲಯ, ಮಂಗಳೂರು ಇವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ಆಯ್ಕೆಗೊಂಡು ದಿನಾಂಕ : 09–02–1998ರ ಪೂರ್ವಾಹ್ನದಿಂದ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ : 25–08–2001ರ ಸರ್ಕಾರದ ಆದೇಶದನ್ವಯ ದಿನಾಂಕ : 23–02–1998 ಮತ್ತು 24–02–1998ರಂದು ಎರಡು ದಿನಗಳ ಅಸಾಧಾರಣ ರಜೆಯನ್ನು ಪಡೆದಿದ್ದರಿಂದ ಈ 2 ದಿನಗಳನ್ನು ಮುಂದೂಡಿ ದಿನಾಂಕ : 11–02–2000 ರಿಂದ ಪರಿವೀಕ್ಷಣಾವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಲಾಗಿದೆ.

ಮೇಲೆ (3)ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ದಿನಾಂಕ : 18–07–2009ರ ಪತ್ರದಲ್ಲಿ, ಶ್ರೀಮತಿ ಜುಡಿತ್ ಓಲ್ಗ ಮಾರ್ಗರೆಟ್ ಕ್ರಾಸ್ಟ, ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಜೆಎಂಎಫ್‌ಸಿ ನ್ಯಾಯಾಲಯ, ಮಂಗಳೂರು ಇವರ ಸೇವಾ ವಿವರಗಳನ್ನು ಮಹಾಲೇಖಪಾಲರ ಕಛೇರಿಯಿಂದ ಪಡೆದು ಪರಿಶೀಲಿಸಿದೆ. ಮೇಲೆ (1)ರಲ್ಲಿ ಓದಲಾದ ದಿನಾಂಕ : 29–01–1998 ಸರ್ಕಾರದ ಅಧಿಸೂಚನೆಯನ್ವಯ, ಆಯ್ಕೆಗೊಂಡು ದಿನಾಂಕ : 09–02–1998ರ ಪೂರ್ವಾಹ್ನದಿಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿದ್ದು, (2)ರಲ್ಲಿ ಓದಲಾದ ದಿನಾಂಕ : 25–08–2001 ರ ಸರ್ಕಾರದ ಆದೇಶದನ್ವಯ 2 ದಿನಗಳ ಅಸಾಧಾರಣ ರಜೆಯನ್ನು ಪಡೆದಿದ್ದರಿಂದ ಆ ದಿನಗಳನ್ನು ಮುಂದೂಡಿ ದಿನಾಂಕ : 11–02–2000 ರಿಂದ ಪರಿವೀಕ್ಷಣಾವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಲಾಗಿದೆ. ಆದ್ದರಿಂದ, ದಿನಾಂಕ : 09–02–2008ಕ್ಕೆ 10 ವರ್ಷಗಳ ನಿರಂತರ ಸೇವೆ ಪೂರೈಸಿದ್ದಾಗ್ಯೂ, ದಿನಾಂಕ : 11–02–2008ಕ್ಕೆ 10 ವರ್ಷಗಳ ನಿರಂತರ ಸೇವೆಯನ್ನು ಯಾವುದೇ ಮುಂಬಡ್ತಿ ಇಲ್ಲದೇ ಪೂರೈಸಿದ್ದಂತೆ ಆಗಿರುತ್ತದೆ. ಸದರಿಯವರು ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣತೆಯನ್ನು ಹೊಂದಿರುತ್ತಾರೆ. ಇವರು ಸದರಿ ಅವಧಿಯಲ್ಲಿ ಎರಡು ದಿನಗಳ ಅಸಾಧಾರಣ ರಜೆಯನ್ನು ಪಡೆದಿರುವುದನ್ನು ಹೊರತು ಪಡಿಸಿ ಇನ್ನಿತರ ಯಾವುದೇ ವೇತನ ರಹಿತ ರಜೆಯನ್ನು ಪಡೆದಿರುವುದಿಲ್ಲ. ಅನಧಿಕೃತವಾಗಿ ಗೈರು ಹಾಜರಾಗಿರುವುದಿಲ್ಲ ಹಾಗೂ ಅಮಾನತ್ತಿನಲ್ಲಿಟ್ಟಿರುವುದಿಲ್ಲ. ಸದರಿ ಅಧಿಕಾರಿಗೆ ಈ ಹಿಂದೆ ಬಡ್ತಿಯನ್ನು ನೀಡಿರುವುದಿಲ್ಲ ಅಥವಾ ಅವರು ಬಡ್ತಿಯನ್ನು ನಿರಾಕರಿಸಿರುವುದಿಲ್ಲ. ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲ ಅಥವಾ ಹೂಡುವ ಸಂಭವವಿರುವುದಿಲ್ಲ ಹಾಗೂ ಯವುದೇ ಕ್ರಿಮಿನಲ್ ಮೊಕದ್ದಮೆ ದಾಖಲಾಗಿರುವುದು ಕಂಡುಬರುವುದಿಲ್ಲ. ದಿನಾಂಕ : 11–02–2008ಕ್ಕೆ ನಿಕಟಪೂರ್ವ 5 ವರ್ಷಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಯಾವುದೇ ಪ್ರತಿಕೂಲ ಷರಾ ಇರುವುದಿಲ್ಲ. ಸದರಿಯವರು ಆಯ್ಕೆ ಕಾಲಿಕ ವೇತನ ಶ್ರೇಣಿಯ ಮಂಜೂರಾತಿಗೆ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ : ಎಫ್‌ಡಿ 1 ಎಸ್‌ಆರ್‌ಪಿ 85, ದಿನಾಂಕ : 22–01–1985ರಲ್ಲಿ ವಿಧಿಸಿರುವ ನಿಬಂಧನೆಗಳನ್ನು ಪೂರೈಸಿದ್ದು, ಆಯ್ಕೆ ಕಾಲಿಕ ವೇತನ ಶ್ರೇಣಿಯ ಮಂಜೂರಾತಿಗೆ ಅರ್ಹರಿರುತ್ತಾರೆ. ಆದ್ದರಿಂದ, ಶ್ರೀಮತಿ ಜುಡಿತ್ ಓಲ್ಗ ಮಾರ್ಗರೆಟ್ ಕ್ರಾಸ್ಟ ಇವರಿಗೆ ದಿನಾಂಕ : 11–02–2008 ರಿಂದ ಜಾರಿಗೆ ಬರುವಂತೆ ರೂ. 11400–21600ಗಳ ವೇತನ ಶ್ರೇಣಿಯಿಂದ 12000–22650ರ ಆಯ್ಕೆ ಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡುವಂತೆ ಶಿಫಾರಸ್ಸನ್ನು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 139 ಪಿಪಿಇ 2009, ಬೆಂಗಳೂರು, ದಿನಾಂಕ : 23-11-2011**

ಪ್ರಸ್ತಾವನೆಯಲ್ಲಿನ ಅಂಶಗಳ ಹಿನ್ನೆಲೆಯಲ್ಲಿ, ಶ್ರೀಮತಿ ಜುಡಿತ್ ಓಲ್ಗ ಮಾರ್ಗರೆಟ್ ಕ್ರಾಸ್ತ, ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಜೆಎಂಎಫ್‌ಸಿ ನ್ಯಾಯಾಲಯ, ಮಂಗಳೂರು ಇವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ಯಾವುದೇ ಮುಂಬಡ್ತಿ ಇಲ್ಲದೆ 10 ವರ್ಷಗಳ ನಿರಂತರ ಸೇವೆಯನ್ನು ಸಲ್ಲಿಸಿದ್ದು, ಸದರಿ ಅವಧಿಯಲ್ಲಿ ಎರಡು ದಿನಗಳ ಅಸಾಧಾರಣ ರಜೆಯನ್ನು ಪಡೆದಿದ್ದರಿಂದ ದಿನಾಂಕ : 11-02-2008 ರಿಂದ ಅನ್ವಯವಾಗುವಂತೆ ಕರ್ನಾಟಕ ನಾಗರೀಕ ಸೇವಾ (ಕಾಲಬದ್ಧ ಬಡ್ತಿ) ನಿಯಮಗಳು, 1983 ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ : ಎಫ್‌ಡಿ 17 ಎಸ್‌ಆರ್‌ಪಿ 2007, ದಿನಾಂಕ : 16-05-2007 ರನ್ವಯ ರೂ. 11400-21600ಗಳ ವೇತನ ಶ್ರೇಣಿಯಿಂದ ರೂ. 12000-22650 ಗಳ ಆಯ್ಕೆ ಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ. ನಿಂಗಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು-ಬಿ)

ಪಿ.ಆರ್. 2789

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

### ಸೇರ್ಪಡೆ

ಸಂಖ್ಯೆ: ಪಸಂಮೀ 363 ಪಅಸೇ 2011, ಬೆಂಗಳೂರು, ದಿನಾಂಕ 28-11-2011

ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 50 ಪಅಸೇ 2010 ದಿನಾಂಕ 27-12-2010ರ ಆದೇಶದ ಭಾಗದಲ್ಲಿನ 7ನೇ ಸಾಲಿನಲ್ಲಿ 'ಜಂಟಿ ನಿರ್ದೇಶಕರ ಹುದ್ದೆಗೆ ನೀಡಿದ ಮುಂಬಡ್ತಿ ದಿನಾಂಕವನ್ನು ದಿನಾಂಕ 27-10-1993 ಎಂದು ಪೂರ್ವಾನ್ವಯವಾಗಿ' ಎಂಬ ಪದಗಳ ನಂತರ 'ವೇತನ ಶ್ರೇಣಿ ರೂ. 10620-260-10880-320-13440-380-14960" ರಲ್ಲಿ ಎಂಬ ಅಂಶವನ್ನು ಸೇರ್ಪಡೆ ಮಾಡಿ ಓದಿಕೊಳ್ಳತಕ್ಕದ್ದು.

ಉಳಿದಂತೆ ದಿನಾಂಕ 27-12-2010ರ ಸರ್ಕಾರಿ ಆದೇಶದಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ಪಿ. ನಾಗರಾಜ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

(ಪಶುಸಂಗೋಪನೆ-ಎ)

ಪಿ. ಆರ್. 2817

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರಕ್ಕೆ ಉಪ-ಕಾರ್ಯದರ್ಶಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :** 1) ಪತ್ರ ಸಂಖ್ಯೆ:ಕರಾಕಾಸೇಪ್ರಾ:10 ಎಡಿಎಂ 2006, ದಿನಾಂಕ 01-04-2006, 31-08-2010, 27-04-2011 ಮತ್ತು 14-07-2011.

**2.** ಸರ್ಕಾರದ ಪತ್ರ ಸಂಖ್ಯೆ: ಲಾ 16 ಎಲ್‌ಎಡಿ 2006, ದಿನಾಂಕ 20-05-2006 ಮತ್ತು 01-07-2011.

3) ಸರ್ಕಾರಿ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 314 ವೆಚ್ಚ 10/2011, ದಿನಾಂಕ 03-10-2011.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 01-04-2006ರ ಪತ್ರದಲ್ಲಿ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರದ ಸದಸ್ಯ ಕಾರ್ಯದರ್ಶಿಗಳು ಪ್ರಾಧಿಕಾರದಲ್ಲಿ ಒಂದು ಉಪ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸಲು ಸರ್ಕಾರವನ್ನು ಕೋರಲು ಗೌರವಾನ್ವಿತ ಪ್ರಧಾನ ಪೋಷಕರು ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯದ ಗೌರವಾನ್ವಿತ ಮುಖ್ಯ ನ್ಯಾಯಮೂರ್ತಿಯವರ ಅಧ್ಯಕ್ಷತೆಯಲ್ಲಿ ದಿನಾಂಕ 05-02-2006 ರಂದು ನಡೆದ 15ನೇ ಸರ್ವ ಸದಸ್ಯರ ಸಭೆಯಲ್ಲಿ ತೀರ್ಮಾನಿಸಲಾಗಿತ್ತು ಸಭೆಯ ನಿರ್ಣಯ ಈ ರೀತಿ ಇದೆ.

"It was unanimously resolved to recommend to the government for creation of the Post of Deputy Secretary in the Karnataka State Legal Services Authority by way of promotion from the Cadre of Assistant Secretary".

ಈ ಹಿನ್ನೆಲೆಯಲ್ಲಿ ಹುದ್ದೆಯನ್ನು ಸೃಜಿಸಿ ಪ್ರಾಧಿಕಾರದ ಶೆಡ್ಯೂಲ್ (1)ಕ್ಕೆ ತಿದ್ದುಪಡಿ ತರುವಂತೆ ಕೋರಿದ್ದರು. ಆ ಬಗ್ಗೆ ಅವರ ಕರ್ತವ್ಯ, ಖರ್ಚು ವೆಚ್ಚ ಹಾಗೂ ಸೇವಾ ಷರತ್ತುಗಳ ಬಗ್ಗೆ ಪೂರ್ಣ ಮಾಹಿತಿಯನ್ನು ಒದಗಿಸುವಂತೆ ಮೇಲೆ (2)ರಲ್ಲಿ ಓದಲಾದ ದಿನಾಂಕ 20-05-2006 ಮತ್ತು 01-07-2011ರ ಪತ್ರದಲ್ಲಿ ಕೋರಲಾಗಿತ್ತು. ಅದರಂತೆ ಮೇಲೆ (1)ರಲ್ಲಿ ಓದಲಾದ ದಿನಾಂಕ 31-08-2010, 27-04-2011 ಮತ್ತು 14-07-2011ರ ಪತ್ರಗಳಲ್ಲಿ ಇತ್ತೀಚೆಗೆ 10 ಜಿಲ್ಲೆಗಳಲ್ಲಿ ಮಧ್ಯಸ್ಥಿಕೆ ಕೇಂದ್ರ 6 ಖಾಯಂ ಲೋಕ-ಅದಾಲತ್‌ಗಳನ್ನು ಸ್ಥಾಪಿಸಿದೆ. ಇದರಿಂದ ರಾಜ್ಯ ಪ್ರಾಧಿಕಾರದ ಕೆಲಸ ಕಾರ್ಯಗಳು ರಾಷ್ಟ್ರೀಯ ಹಾಗೂ ರಾಜ್ಯ ಕ್ರಿಯಾಯೋಜನೆ ರೂಪಿಸಿಕೊಂಡು ಕಾರ್ಯನಿರ್ವಹಿಸಬೇಕಿದ್ದು ಹಾಲಿ ಇರುವ ಉಪಕಾರ್ಯದರ್ಶಿ, ಆಡಳಿತ ವಿಭಾಗ/ರಾಜ್ಯ ಸಂಧಾನದ ವಿಷಯ ನಿರ್ವಹಿಸುತ್ತಿದ್ದು, ಕ್ರಿಯಾಯೋಜನೆಗೆ ಸಂಬಂಧಿಸಿದ ವಿಷಯಗಳನ್ನು ಅವರೊಬ್ಬರಿಂದ ನೋಡಲು ಸಾಧ್ಯವಿಲ್ಲದೆ ಇರುವುದರಿಂದ ಒಂದು ಉಪಕಾರ್ಯದರ್ಶಿ ಹುದ್ದೆ ಸೃಜಿಸಿದಲ್ಲಿ 13ನೇ ಹಣಕಾಸು ಆಯೋಗದ ಕೆಲಸ ಕಾರ್ಯಗಳನ್ನು ಸುಗಮವಾಗಿ ಕಾರ್ಯರೂಪಕ್ಕೆ ತರಲು ಅನುಕೂಲವಾಗುವುದೆಂದು ಸ್ಪಷ್ಟೀಕರಣ ನೀಡಿರುತ್ತಾರೆ. ಆ ಬಗ್ಗೆ ಆರ್ಥಿಕ ಇಲಾಖೆಯನ್ನು ಸಂಪರ್ಕಿಸಲಾಗಿ 13ನೇ ಹಣಕಾಸು ಆಯೋಗದ ವತಿಯಿಂದ 2010-2015ನೇ ಸಾಲುಗಳಿಗೆ ಪ್ರತಿ ವರ್ಷ ರೂ. 27,34 ಕೋಟಿಯಂತೆ ಲೋಕ-ಅದಾಲತ್ ಮತ್ತು ಕಾನೂನು ನೆರವಿಗಾಗಿ 136.71 ಕೋಟಿ ರೂ.ಗಳನ್ನು ಒದಗಿಸಲಾಗಿದೆ. 13ನೇ ಹಣಕಾಸು ಆಯೋಗಕ್ಕೆ ಸಂಬಂಧಿಸಿದ ಕಾರ್ಯಗಳನ್ನು ಮೊದಲಿಗೆ ಕ್ರಿಯಾ ಯೋಜನೆಯನ್ನು ರೂಪಿಸಿ

ಸಂಬಂಧಿಸಿದ ಪ್ರಾಧಿಕಾರದ ಅನುಮೋದನೆ ಪಡೆದು ಅನುಷ್ಠಾನಗೊಳಿಸಬೇಕಾಗಿರುತ್ತದೆ. ಈ ಹಿನ್ನೆಲೆಯಲ್ಲಿ ರಾಜ್ಯ ಕಾನೂನು ಸೇವಾ ಪ್ರಾಧಿಕಾರಕ್ಕೆ ಒಂದು ಉಪಕಾರ್ಯದರ್ಶಿ ಹುದ್ದೆಯನ್ನು ಹೆಚ್ಚುವರಿಯಾಗಿ ಸೃಜಿಸಲು ಆರ್ಥಿಕ ಇಲಾಖೆಯು ಸಹಮತಿಸಿದೆ.

ಅದರಂತೆ ಈ ಕೆಳಕಂಡ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಲಾ 16 ಎಲ್ಎಡಿ 2006, ಬೆಂಗಳೂರು, ದಿನಾಂಕ 22–11–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರಕ್ಕೆ ಒಂದು ಉಪ ಕಾರ್ಯದರ್ಶಿ ಹುದ್ದೆಯನ್ನು ಹೆಚ್ಚುವರಿಯಾಗಿ ಸೃಜಿಸಲು ಮಂಜೂರಾತಿ ನೀಡಲಾಗಿದೆ. ಇವರ ಕರ್ತವ್ಯ ಹಾಗೂ ರೂಪುರೇಷೆಗಳನ್ನು ಕರ್ನಾಟಕ ರಾಜ್ಯ ಕಾನೂನು ಸೇವಾ ಪ್ರಾಧಿಕಾರವು ನಿರ್ಣಯಿಸಬಹುದಾಗಿದೆ. ಇದಕ್ಕೆ ತಗಲುವ ವೆಚ್ಚವನ್ನು ಪ್ರಾಧಿಕಾರಕ್ಕೆ ಒದಗಿಸುವ ಯೋಜನೇತರ ಸಹಾಯಾನುದಾನ ಲೆಕ್ಕ ಶೀರ್ಷಿಕೆಯಿಂದ ಭರಿಸಬಹುದಾಗಿದೆ.

ಇದನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 314 ವೆಚ್ಚ–10/2011, ದಿನಾಂ 03–10–2011ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ಆರ್. ಶಕುಂತಲ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)

ಪಿ.ಆರ್. 2818 ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಹಾಸನ ಕಂದಾಯ ತಾಲ್ಲೂಕಿಗೆ ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**
1) ಅಧ್ಯಕ್ಷರು, ವಕೀಲರ ಸಂಘ ಹಾಸನ ಇವರ ಪತ್ರ ಸಂಖ್ಯೆ: ನಕಾಸಂ 9132/2010–11, ದಿನಾಂಕ 12–05–2011
2) ಸರ್ಕಾರದ ಪತ್ರ ಸಂಖ್ಯೆ: ಲಾ 159 ಎಲ್‌ಸಿಎಲ್ 2011, ದಿನಾಂಕ 28–06–2011
3) ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನ ಇವರ ಪತ್ರ ಸಂಖ್ಯೆ: 3214/2011, ದಿನಾಂಕ 13–07–2011.
4) ಜಿಲ್ಲಾಧಿಕಾರಿ, ಹಾಸನ ಇವರ ಪತ್ರ ಸಂಖ್ಯೆ: ಎಂಎಜಿ/119/2011–12, ದಿನಾಂಕ 15–09–2011.

**ಪ್ರಸ್ತಾವನೆ :**

ಅಧ್ಯಕ್ಷರು, ವಕೀಲರ ಸಂಘ, ಹಾಸನರವರು ಮೇಲೆ (1)ರಲ್ಲಿ ಓದಲಾದ ದಿನಾಂಕ 12–05–2011ರ ಪತ್ರದಲ್ಲಿ ಹಾಸನ ಕಂದಾಯ ತಾಲ್ಲೂಕಿಗೆ ಹೆಚ್ಚುವರಿ ನೋಟರಿಗಳನ್ನು ಸೃಜಿಸುವಂತೆ ಕೋರಿದ್ದರು. ಆ ಬಗ್ಗೆ ಪರಿಶೀಲಿಸಿ ವರದಿ ಸಲ್ಲಿಸಲು ಮೇಲೆ (2)ರಲ್ಲಿ ಓದಲಾದ ದಿನಾಂಕ 28–06–2011ರ ಸರ್ಕಾರದ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನ ಹಾಗೂ ಜಿಲ್ಲಾಧಿಕಾರಿ, ಹಾಸನ ಇವರುಗಳನ್ನು ಕೋರಲಾಗಿತ್ತು.

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನ ಹಾಗೂ ಜಿಲ್ಲಾಧಿಕಾರಿಗಳು, ಹಾಸನ ರವರು ಕ್ರಮವಾಗಿ ಮೇಲೆ (3) ಮತ್ತು (4)ರಲ್ಲಿ ಓದಲಾದ ದಿನಾಂಕ 13–07–2011 ಮತ್ತು 15–09–2011ರ ಪತ್ರಗಳಲ್ಲಿ ಹಾಸನ ಕಂದಾಯ ತಾಲ್ಲೂಕಿನಲ್ಲಿ ಕಾರ್ಯ ನಿರ್ವಹಿಸುತ್ತಿರುವ 9 ನೋಟರಿಗಳ ಕೆಲಸದ ವಿವರಗಳ ಮಾಹಿತಿಗಳ ಸಹಿತ ವರದಿ ನೀಡಿ, ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ 9 ಜನ ನೋಟರಿಗಳು ಹಾಗೂ ಕೇಂದ್ರ ಸರ್ಕಾರದ ಇಬ್ಬರು ನೋಟರಿಗಳು ಕರ್ತವ್ಯ ನಿರ್ವಹಿಸುತ್ತಿದ್ದು, 2011ರ ಜನಗಣತಿ ಆಧಾರದಂತೆ ಹಾಸನ ನಗರದ ಜನಸಂಖ್ಯೆ ಶೇಕಡ 10 ರಷ್ಟು ಹೆಚ್ಚಾಗಿದ್ದು, ಹಾಸನ ನಗರ ಜಿಲ್ಲಾ ಕೇಂದ್ರವಾಗಿರುವುದರಿಂದ ಹೊಸದಾಗಿ ಹಲವಾರು ಇಲಾಖೆಗಳು ಪ್ರಾರಂಭವಾಗಿ ಸರ್ಕಾರದಿಂದ ಸವಲತ್ತುಗಳನ್ನು ಹೊಂದಲು ಮತ್ತು ಇನ್ನಿತರ ಕೆಲಸಗಳಿಗಾಗಿ ಸಾರ್ವಜನಿಕರು ನೋಟರಿಗಳ ಸೇವೆಯನ್ನು ಪಡೆಯಬೇಕಾಗಿರುವುದರಿಂದ ಹಾಸನ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ 3 ರಿಂದ 5 ನೋಟರಿಗಳನ್ನು ಹೆಚ್ಚುವರಿಯಾಗಿ ಸೃಜಿಸುವ ಅವಶ್ಯಕತೆ ಇರುವುದೆಂಬ ಅಭಿಪ್ರಾಯವನ್ನು ನೀಡಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಅದರಂತೆ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಲಾ 159 ಎಲ್‌ಸಿಎಲ್ 2011, ಬೆಂಗಳೂರು, ದಿನಾಂಕ 11–11–2011**

ಹಾಸನ ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಹೆಚ್ಚುವರಿಯಾಗಿ ಮೂರು ನೋಟರಿ ಹುದ್ದೆಗಳನ್ನು ಸೃಜಿಸಲಾಗಿದೆ. .

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ಆರ್. ಶಕುಂತಲ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)

ಪಿ.ಆರ್. 2819 ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಕ.ನಾ.ಸೇ. ನಿಯಮಗಳ ನಿಯಮ 247-(I), 247-A-(I), ಮತ್ತು 224-A ಅನ್ವಯ ನ್ಯಾಯಾಂಗ ಅಧಿಕಾರಿಗಳಿಗೆ ಹೆಚ್ಚುವರಿ ಅರ್ಹತಾದಾಯಕ ಸೇವೆಯನ್ನು ನಿವೃತ್ತಿ ಸೌಲಭ್ಯಗಳಿಗೆ ಪರಿಗಣಿಸುವ ಕುರಿತು.

**ಓದಲಾಗಿದೆ :** ರಿಜಿಸ್ಟ್ರಾರ್ ಜನರಲ್‌ರವರ ಪತ್ರದ ಸಂಖ್ಯೆ: ಜಿಒಬಿ. I-225/2007, ದಿನಾಂಕ 30–10–2009, 07–12–2009, 29–12–2009, 17–03–2010 ಮತ್ತು 22–04–2010.

**ಪ್ರಸ್ತಾವನೆ :**

ರಿಜಿಸ್ಟ್ರಾರ್ ಜನರಲ್ ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರು ಮೇಲೆ ಓದಲಾದ ಪತ್ರಗಳೊಂದಿಗೆ ನ್ಯಾಯಾಂಗ ಅಧಿಕಾರಿಗಳ ಸೇವಾ ವಿವರಗಳನ್ನೊಳಗೊಂಡ ಪಟ್ಟಿ ಮಾಡಿ ಲಗತ್ತಿಸಿ ಕಳುಹಿಸುತ್ತಾ, ಸದರಿ ಅಧಿಕಾರಿಗಳಿಗೆ ಕ.ನಾ.ಸೇ. ನಿಯಮಾವಳಿಗಳ ನಿಯಮ 247-(I), 247-A-(I), ಮತ್ತು 224-A ಅನ್ವಯ ಲಭ್ಯವಾಗುವ ಅರ್ಹತಾದಾಯಕ ಸೇವೆಯನ್ನು ನಿವೃತ್ತಿ ಸೌಲಭ್ಯಗಳಿಗೆ ಪರಿಗಣಿಸಲು ಪ್ರಸ್ತಾಪಿಸಿರುತ್ತಾರೆ.

ಸದರಿ ಪಟ್ಟಿಯಲ್ಲಿನ ಅಧಿಕಾರಿಗಳ ಸೇವಾ ವಿವರಗಳನ್ನು ಕ.ನಾ.ಸೇ. ನಿಯಮಗಳ ನಿಯಮ 247-(I), 247-A-(I), ಮತ್ತು 224-A ಅನ್ವಯ ಅವರುಗಳಿಗೆ ಲಭ್ಯವಾಗುವ ಹೆಚ್ಚುವರಿ ಅರ್ಹತಾದಾಯಕ ಸೇವೆಯನ್ನು ಮಂಜೂರು ಮಾಡುವ ಕುರಿತು ಪರಿಶೀಲಿಸಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 09 ಎಲ್ಎಸಿ 2010, ಬೆಂಗಳೂರು, ದಿನಾಂಕ 05–12–2011**

ಪ್ರಸ್ತಾವನೆಯಲ್ಲಿ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧ –I, II ಮತ್ತು III ರಲ್ಲಿ ಕ್ರಮವಾಗಿ ಪಟ್ಟಿ ಮಾಡಿರುವಂತೆ ನ್ಯಾಯಾಂಗ ಅಧಿಕಾರಿಗಳಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247-(I), 247-A-(I), ಮತ್ತು 224-A ರೀತ್ಯಾ ಅರ್ಹವಾಗುವ ಹೆಚ್ಚುವರಿ ಸೇವೆಯನ್ನು ಅವರುಗಳ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವಂತೆ ಅವರುಗಳ ಹೆಸರಿನ ಮುಂದೆ ನಮೂದಿಸಿರುವ ಅವಧಿಯನ್ನು ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಸರ್ಕಾರವು ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 59 ವೆಚ್ಚ–10/2010, ದಿನಾಂಕ 26–02–2010 ಮತ್ತು ಆಇ 214 ವೆಚ್ಚ–10/2010, ದಿನಾಂಕ 10–06–2010ರಲ್ಲಿ ನೀಡಿರುವ ಸಹಮತದೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಿ. ಎ. ಗೌರೀಶ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

ಸರ್ಕಾರದ ಆದೇಶ ಸಂಖ್ಯೆ: ಲಾ 09 ಎಲ್ಎಸಿ 2010, ಬೆಂಗಳೂರು, ದಿನಾಂಕ 05–12–2011

**ಅನುಬಂಧ–I**

| ಕ್ರ.ಸಂ. | ನ್ಯಾಯಾಧೀಶರ ಹೆಸರು ಮತ್ತು ಪದನಾಮ ಶ್ರೀ/ಶ್ರೀಮತಿ | ನಿಯಮ 247 (I) ರನ್ವಯ ಲಭ್ಯವಾಗುವ ಹೆಚ್ಚುವರಿ ಅರ್ಹತಾದಾಯಕ ಸೇವೆ |
|---|---|---|
| 1 | ಹಡಗಲಿ ರಾಮು ಜಿಲ್ಲಾ ನ್ಯಾಯಾಧೀಶರು | 5 ವರ್ಷಗಳು |
| 2 | ಕೆ.ಪಿ. ದಿನೇಶ್, ಹಿರಿಯ ಸಿವ್ಹಿಲ್ ನ್ಯಾಯಾಧೀಶರು | 5 ವರ್ಷಗಳು |
| 3 | ಬಿ. ವಿ. ಪ್ರಕಾಶ್, ಜಿಲ್ಲಾ ನ್ಯಾಯಾಧೀಶರು | 4 ವರ್ಷಗಳು |
| 4 | ಟಿ. ಸಿ. ಶ್ರೀಕಾಂತ್, ಸಿವ್ಹಿಲ್ ಜಡ್ಜ್ (ಕಿ.ವಿ.) | 5 ವರ್ಷಗಳು |
| 5 | ಎನ್. ಎಸ್. ನೇಗಿನಾಳ, ಪ್ರಿಸ್ಸೈಡಿಂಗ್ ಆಫೀಸರ್ | 5 ವರ್ಷಗಳು |
| 6 | ಅಶೋಕ ಬಿ. ಬನಸೋಡೆ, XVIII ACCMM LXX ASCJ, Bangalore | 5 ವರ್ಷಗಳು |

**ಡಿ. ಎ. ಗೌರೀಶ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

ಸರ್ಕಾರದ ಆದೇಶ ಸಂಖ್ಯೆ: ಲಾ 09 ಎಲ್ಎಸಿ 2010, ಬೆಂಗಳೂರು, ದಿನಾಂಕ 05–12–2011

**ಅನುಬಂಧ–II**

| ಕ್ರ.ಸಂ. | ನ್ಯಾಯಾಧೀಶರ ಹೆಸರು ಮತ್ತು ಪದನಾಮ ಶ್ರೀ/ಶ್ರೀಮತಿ | ನಿಯಮ 247-A (I) ರನ್ವಯ ಲಭ್ಯವಾಗುವ ಹೆಚ್ಚುವರಿ ಅರ್ಹತಾದಾಯಕ ಸೇವೆ |
|---|---|---|
| 1 | ಎನ್. ನಂದಿನಿ, ಸಿವ್ಹಿಲ್ ಜಡ್ಜ್ (ಕಿ.ವಿ.) | 4 ವರ್ಷಗಳು |
| 2 | ಆರ್. ಎಸ್. ಶಿಂಧೆ, ನಿವೃತ್ತ ಸಿವ್ಹಿಲ್ ಜಡ್ಜ್ (ಹಿ.ವಿ.) | 4 ವರ್ಷಗಳು |
| 3 | ಡಿ. ಪಿ. ನಾಯಕ್, ಸಿವ್ಹಿಲ್ ಜಡ್ಜ್ (ಹಿ.ವಿ.) | 4 ವರ್ಷಗಳು |

**ಡಿ. ಎ. ಗೌರೀಶ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1)

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

ಸರ್ಕಾರದ ಆದೇಶ ಸಂಖ್ಯೆ: ಲಾ 09 ಎಲ್ಎಸಿ 2010, ಬೆಂಗಳೂರು, ದಿನಾಂಕ 05–12–2011

**ಅನುಬಂಧ–III**

| ಕ್ರ.ಸಂ. | ನ್ಯಾಯಾಧೀಶರ ಹೆಸರು ಮತ್ತು ಪದನಾಮ ಶ್ರೀ/ಶ್ರೀಮತಿ | ನಿಯಮ 224-A ರನ್ವಯ ಲಭ್ಯವಾಗುವ ಹೆಚ್ಚುವರಿ ಅರ್ಹತಾದಾಯಕ ಸೇವೆ |
|---|---|---|
| 1 | ವಿ. ಎನ್. ರವೀಂದ್ರ, VI ಅಡಿಶನಲ್ ಸಿಟಿ ಸಿವ್ಹಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು | ದಿನಾಂಕ 01–03–1982 ರಿಂದ 17–02–1987 ರವರೆಗೆ |
| 2 | ಕೆ.ಬಿ.ಎಂ. ಪಟೇಲ್, ಪ್ರಿಸೈಡಿಂಗ್ ಆಫೀಸರ್, ಫಾಸ್ಟ್‌ಟ್ರ್ಯಾಕ್ ಕೋರ್ಟ್-III, ಹಾಸನ. | ದಿನಾಂಕ 01–03–1986 ರಿಂದ 25–05–1992 ರವರೆಗೆ |

**ಡಿ. ಎ. ಗೌರೀಶ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1)

ಪಿ.ಆರ್. 2820 ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ವಕೀಲರ ಕ್ಷೇಮಾಭಿವೃದ್ಧಿ ನಿಧಿಗೆ 2011–12ನೇ ಸಾಲಿನಲ್ಲಿ ಅನುದಾನವನ್ನು ಬಿಡುಗಡೆ ಮಾಡುವ ಕುರಿತು–ಯೋಜನೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಲಾ 57 ಎಲ್‌ಎಂ 2011, ದಿನಾಂಕ 07–04–2011

2) ಆಡಳಿತಾಧಿಕಾರಿ ಅಡ್ವೋಕೇಟ್ ಜನರಲ್ ರವರ ಕಛೇರಿ ಇವರ ಪತ್ರ ದಿನಾಂಕ 28–09–2011.

3) ಅಧ್ಯಕ್ಷರು, ಕರ್ನಾಟಕ ರಾಜ್ಯ ವಕೀಲರ ಪರಿಷತ್ತು ಇವರ ಪತ್ರ ದಿನಾಂಕ 21–09–2011

**ಪ್ರಸ್ತಾವನೆ :**

ಕರ್ನಾಟಕ ರಾಜ್ಯ ವಕೀಲರ ಕ್ಷೇಮಾಭಿವೃದ್ಧಿ ನಿಧಿಗೆ 2011–12ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2014–00–114–0–03–104 (ಯೋಜನೆ) ಯಡಿ ರೂ. 50 ಲಕ್ಷ ಆಯವ್ಯಯ ಅವಕಾಶವಿದ್ದು ಮುಂದುವರಿದ ಯೋಜನೆಯಡಿ ಮುಂದುವರಿಸಲು ಮೇಲೆ (1)ರಲ್ಲಿ ಓದಲಾದ ದಿನಾಂಕ 07–04–2011ರ ಆದೇಶದಲ್ಲಿ ಮಂಜೂರಾತಿ ನೀಡಿದೆ ಮೇಲೆ (2)ರಲ್ಲಿ ಓದಲಾದ ದಿನಾಂಕ 28–09–2011ರ ಪತ್ರದಲ್ಲಿ ಆಡಳಿತಾಧಿಕಾರಿ ಅಡ್ವೋಕೇಟ್ ಜನರಲ್ ರವರ ಕಛೇರಿಯವರು ಹಾಗೂ ಮೇಲೆ (3)ರಲ್ಲಿ ಓದಲಾದ ದಿನಾಂಕ 21–09–2011ರ ಪತ್ರದಲ್ಲಿ ಅಧ್ಯಕ್ಷರು, ಕರ್ನಾಟಕ ರಾಜ್ಯ ವಕೀಲರ ಪರಿಷತ್ತು ಇವರು ವಕೀಲರ ಕ್ಷೇಮಾಭಿವೃದ್ಧಿ ನಿಧಿಗಾಗಿ ಆಯವ್ಯಯದಲ್ಲಿ ಒದಗಿಸಲಾಗಿರುವ ಮೊತ್ತ ರೂ. 50.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 171 ಎಲ್‌ಸಿಎಲ್ 2011, ಬೆಂಗಳೂರು, ದಿನಾಂಕ 18–11–2011**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕನಾಟಕ ರಾಜ್ಯ ವಕೀಲರ ಕ್ಷೇಮಾಭಿವೃದ್ಧಿ ನಿಧಿಗೆ ಲೆಕ್ಕ ಶೀರ್ಷಿಕೆ 2014–00–114–0–03–104 (Lawyers Welfare Fund) ಯೋಜನೆಯಡಿ ತ್ರೈಮಾಸಿಕ ಅವಧಿಯವರೆಗೆ ರೂ. 37.50 ಲಕ್ಷಗಳನ್ನು (ರೂಪಾಯಿ ಮೂವತ್ತೇಳು ಲಕ್ಷದ ಐವತ್ತು ಸಾವಿರ ಮಾತ್ರ) ಈ ಕೆಳಕಂಡ ಷರತ್ತಿಗೊಳಪಟ್ಟು ಕರ್ನಾಟಕ ರಾಜ್ಯ ವಕೀಲರ ಪರಿಷತ್ತಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಹಣವನ್ನು ವಕೀಲರ ಸಂಘಗಳಿಗೆ ಸಹಾಯಾನುಧನ ನಿಯಮಾವಳಿಯಲ್ಲಿ ಸ್ಪಷ್ಟಪಡಿಸಿರುವಂತೆ ವಕೀಲರ ಪರಿಷತ್ತು ಅಡ್ವೋಕೇಟ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯರವರಿಗೆ ಬಿಲ್ಲನ್ನು ಸಲ್ಲಿಸಿ ಹಣ ಪಾವತಿಸಿಕೊಳ್ಳಬಹುದಾಗಿರುತ್ತದೆ.

1. ಅನುದಾನವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ನಿಯಮಾನುಸಾರ ಬಳಸತಕ್ಕದ್ದು.
2. ಬಳಕೆ ಪ್ರಮಾಣ ಪತ್ರವನ್ನು ವಕೀಲರ ಪರಿಷತ್ತಿನಿಂದ ಅಂಕಿ ಅಂಶಗಳ ಸಹಿತ ಪಡೆದು ಕಾಲಮಿತಿಯೊಳಗೆ ನಿಯಮಾನುಸಾರ ಸಲ್ಲಿಸತಕ್ಕದು.

ಈ ಆದೇಶವನ್ನು ಅಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ವನಿ 494 ಆಂಅಬಿ 2011 ದಿನಾಂಕ 11–11–2011ರ ಸಹಮತಿ ಹಾಗೂ ಕಾರ್ಯದರ್ಶಿಗಳಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–05–2008 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ಆರ್. ಶಕುಂತಲ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)

ಪಿ.ಆರ್. 2821 ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಕೆ. ಆರ್. ನಗರ ಕಂದಾಯ ತಾಲ್ಲೂಕಿಗೆ ಹೆಚ್ಚುವರಿ ನೋಟರಿ ಹುದ್ದೆಗಳನ್ನು ಸೃಜಿಸುವ ಬಗ್ಗೆ

**ಓದಲಾಗಿದೆ :** 1) ಕೆ. ಆರ್. ನಗರ ವಕೀಲರ ಸಂಘದ ಪತ್ರ ದಿನಾಂಕ 26–08–2010

2) ಸರ್ಕಾರದ ಪತ್ರ ಸಂಖ್ಯೆ: ಲಾ 201 ಎಲ್‌ಸಿಎಲ್ 2010, ದಿನಾಂಕ 16–11–2010 ಹಾಗೂ 30–08–2011.

3) ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮೈಸೂರು ಇವರ ಪತ್ರ ಸಂಖ್ಯೆ: CRR/NOT/11/13594/2011, ದಿನಾಂಕ 30–09–2011.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 26–08–2010ರ ಪತ್ರದಲ್ಲಿ ಕೆ.ಆರ್. ನಗರ ವಕೀಲರ ಸಂಘದ ಅಧ್ಯಕ್ಷರು ಸಂಘದ ರೆಸಲ್ಯೂಷನ್ ಪ್ರತಿಯೊಂದಿಗೆ ಕೆ.ಆರ್. ನಗರದಲ್ಲಿ ಕರ್ತವ್ಯದ ಒತ್ತಡ ಹೆಚ್ಚಾಗಿರುವುದಿರಂದ ಹಾಲಿ ಇರುವ 2 ನೋಟರಿಗಳು ಸಾಕಾಗುವುದಿಲ್ಲ ಹೆಚ್ಚುವರಿ ಇನ್ನೂ 2 ನೋಟರಿಗಳ ಅವಶ್ಯಕತೆ ಇದೆ ಎಂದು ಜಿಲ್ಲಾಧಿಕಾರಿಗಳ ಮೂಲಕ ಕೋರಿದ್ದರು. ಆ ಬಗ್ಗೆ ಪರಿಶೀಲಿಸಿ ಕೆ.ಆರ್. ನಗರ ತಾಲ್ಲೂಕಿಗೆ ಹೆಚ್ಚುವರಿ ನೋಟರಿಗಳ ಅವಶ್ಯಕತೆ ಬಗ್ಗೆ ಹಾಲಿ ಇರುವ ನೋಟರಿಗಳ ಕರ್ತವ್ಯದ ಅಂಕಿ ಅಂಶಗಳ ಪೂರಕ ವಿವರ/ದಾಖಲೆಗಳ ಸಹಿತ ವರದಿ ಸಲ್ಲಿಸುವಂತೆ ಮೇಲೆ (2)ರಲ್ಲಿ ಓದಲಾದ ದಿನಾಂಕ 16–11–2010 ಹಾಗೂ 30–08–2011ರ ಪತ್ರಗಳಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮೈಸೂರು ಇವರನ್ನು ಕೋರಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ದಿನಾಂಕ 30–09–2011ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮೈಸೂರು ಇವರು ಕೆ.ಆರ್. ನಗರದಲ್ಲಿ ಕೇಂದ್ರ ಸರ್ಕಾರದ ಒಬ್ಬ ನೋಟರಿ ಹಾಗೂ ರಾಜ್ಯ ಸರ್ಕಾರದ ಇಬ್ಬರು ನೋಟರಿಗಳಿದ್ದು, ಅವರ ಕರ್ತವ್ಯದ ಬಗ್ಗೆ ಅಂಕಿ ಅಂಶಗಳನ್ನು ಪರಿಶೀಲಿಸಲಾಗಿದ್ದು ಅಂಕಿ ಅಂಶಗಳ ಆಧಾರದನ್ವಯ ಕೆ.ಆರ್. ನಗರಕ್ಕೆ ಇನ್ನೂ 1 ನೋಟರಿಯ ಅಗತ್ಯ ಕಂಡುಬರುತ್ತದೆ ಎಂಬ ಅಭಿಪ್ರಾಯ ನೀಡಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಅದರಂತೆ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಲಾ 201 ಎಲ್‌ಸಿಎಲ್ 2010, ಬೆಂಗಳೂರು, ದಿನಾಂಕ 19–11–2011**

ಮೈಸೂರು ಜಿಲೆಯ ಕೆ.ಆರ್. ನಗರ ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್. ಆರ್. ಶಕುಂತಲ**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)
ಪಿ.ಆರ್. 2822 ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** 2011–12ನೇ ಸಾಲಿಗೆ ಕರ್ನಾಟಕ ರಾಜ್ಯ ಬಾರ್ ಕೌನ್ಸಿಲ್, ಬೆಂಗಳೂರು ಇವರಿಗೆ ರೂ. 9.80 ಲಕ್ಷ ಅನುದಾನ ಮಂಜೂರಾತಿ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಲಾ 210 ಎಲ್‌ಸಿಎಲ್ 2002, ದಿನಾಂಕ 10–07–2003
2) ಅಸಿಸ್ಟೆಂಟ್ ರಿಜಿಸ್ಟ್ರಾರ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಹೆಚ್‌ಸಿಬಿ/230/ಬಾರ್ ಕೌನ್ಸಿಲ್ 1983, ದಿನಾಂಕ 29–9–2011

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1) ದಿನಾಂಕ 10–07–2003ರ ಅಧಿಸೂಚನೆಯಲ್ಲಿ ಕರ್ನಾಟಕ ರಾಜ್ಯ ವಕೀಲರ ಪರಿಷತ್ತಿಗೆ ರೂ. 9.80 ಲಕ್ಷಗಳನ್ನು ನಿಗದಿಗೊಳಿಸಿ ವಕೀಲರುಗಳ ಸಂಘಗಳಿಗೆ ಸಹಾಯಾನುದಾನ ನಿಯಮಗಳನ್ವಯ ನೀಡುವ, ಸಹಾಯಾನುದಾನ ನಿಯಮಾವಳಿಗಳಿಗೆ ತಿದ್ದುಪಡಿ (Amendment) ತರಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2)ರ ದಿನಾಂಕ 29–09–2011 ಪತ್ರದಲ್ಲಿ ಅಸಿಸ್ಟೆಂಟ್ ರಿಜಿಸ್ಟ್ರಾರ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರು ಕರ್ನಾಟಕ ರಾಜ್ಯ ಬಾರ್ ಕೌನ್ಸಿಲ್‌ಗೆ 2011–12ನೇ ಸಾಲಿಗೆ ಈ ಕೆಳಕಂಡ ಉದ್ದೇಶಗಳಿಗಾಗಿ ಸಹಾಯಾನುದಾನವನ್ನು ಬಿಡುಗಡೆ ಮಡುವಂತೆ ಕೋರಿರುತ್ತಾರೆ.

1. ಕಿರಿಯ ವಕೀಲರುಗಳಿಗೆ ಕಾನೂನು ಕಮ್ಮಟ/ಕಾರ್ಯಾಗಾರ ಹಾಗೂ ವಕೀಲರುಗಳಿಗೆ ತರಬೇತಿ ನೀಡಲು
2. ಸೆಮಿನಾರ್ ಮತ್ತು ಕಾನೂನು ಶಿಕ್ಷಣ ಕಾರ್ಯಕ್ರಮಗಳಿಗಾಗಿ

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಪ್ರಸಕ್ತ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2014–00–800–4–00 059ರಡಿ ರೂ. 15.93 ಲಕ್ಷಗಳ ಆಯವ್ಯಯ ಅವಕಾಶವಿದ್ದು ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಅಧಿಸೂಚನೆ ದಿನಾಂಕ 10–07–2003ರ ತಿದ್ದುಪಡಿಯಲ್ಲಿ ಸದರಿ ಉದ್ದೇಶಕ್ಕಾಗಿ ನಿಗದಿಗೊಳಿಸಿರುವಂತೆ ರೂ. 9.80 ಲಕ್ಷಗಳನ್ನು ಬಿಡುಗಡೆ ಮಾಡಲು ತೀರ್ಮಾನಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 321 ಎಲ್‌ಸಿಎಲ್ 2011, ಬೆಂಗಳೂರು, ದಿನಾಂಕ 02–12–2011**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕರ್ನಾಟಕ ರಾಜ್ಯ ಬಾರ್ ಕೌನ್ಸಿಲ್‌ಗೆ 2011–12ನೇ ಸಾಲಿಗೆ ರೂ. 9.80 ಲಕ್ಷಗಳ (ರೂಪಾಯಿ ಒಂಭತ್ತು ಲಕ್ಷದ ಎಂಭತ್ತು ಸಾವಿರ ಮಾತ್ರ) ಸಹಾಯಾನುದಾನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಸದರಿ ಮೊತ್ತವನ್ನು ಮೇಲಿನ ಉದ್ದೇಶಗಳಿಗಾಗಿ ಮಾತ್ರ ವಿನಿಯೋಗಿಸತಕ್ಕದ್ದು

2011–12ನೇ ಸಾಲಿನಲ್ಲಿ ಬಿಡುಗಡೆ ಮಾಡಲಾಗುವ ಮೊತ್ತಕ್ಕೆ ಬಳಕೆಯ ಪ್ರಮಾಣ ಪತ್ರವನ್ನು (Utilization Certificate) ಅಡ್ವೋಕೇಟ್ ಜನರಲ್ (ಸಕ್ಷಮ ಪ್ರಾಧಿಕಾರದ)ರವರ ಮೇಲು ರುಜುವಿನೊಂದಿಗೆ ಸಲ್ಲಿಸುವ ಷರತ್ತಿಗೊಳಪಟ್ಟಿದೆ.

ಈ ಸಹಾಯಾನುದಾನವನ್ನು ಲೆಕ್ಕ ಶೀರ್ಷಿಕೆ 2014–00–800–4–00 ನ್ಯಾಯಾಲಯದ ನೌಕರರಿಗಾಗಿ ತರಬೇತಿ ಸಂಸ್ಥೆ ಉಪ ಶೀರ್ಷಿಕೆ 059–ಇತರೆ ಖರ್ಚು ಇದರಡಿಯ ಯೋಜನೇತರ ಬಾಬ್ತಿನಲ್ಲಿ ಒದಗಿಸಲಾದ ಹಣದಿಂದ ಭರಿಸತಕ್ಕದ್ದು.

ಇದನ್ನು ಅಂತರಿಕ ಆರ್ಥಿಕ ಸಲಹೆಗಾರರು, ವಸತಿ, ನಗರಾಭಿವೃದ್ಧಿ, ಕಾನೂನು ಮತ್ತು ಇ–ಆಡಳಿತ ಇಲಾಖೆಯವರ ಟಿಪ್ಪಣಿ ಸಂಖ್ಯೆ: ವನಇ 508 ಅಂಅಬಿ 2011 ದಿನಾಂಕ 18–11–2011 ಸಹಮತಿ ಹಾಗೂ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್. ಆರ್. ಶಕುಂತಲ**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)
ಪಿ.ಆರ್. 2823 ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಕೆ.ಸಿ. ರಾಜನ್, ನಿವೃತ್ತ ಉಪ ನಿರ್ದೇಶಕರು, ಖಜಾನೆ ಇಲಾಖೆ ಅವರ ಅಮಾನತ್ತಿನ ಅವಧಿಯನ್ನು ಇತ್ಯರ್ಥ ಪಡಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಆಇ 67 ಆಖಇ 2001, ದಿನಾಂಕ : 23–11–2001.

2. ಸರ್ಕಾರಿ ಆದೇಶ ಸಂಖ್ಯೆ : ಆಇ 67 ಆಖಇ 2001, ದಿನಾಂಕ : 20–8–2003.

**ಪ್ರಸ್ತಾವನೆ :**

ಸಾರ್ವಜನಿಕ ಶಿಕ್ಷಣ ಇಲಾಖೆಯ ಕ್ಷೇತ್ರ ಶಿಕ್ಷಣಾಧಿಕಾರಿ, ಬೆಂಗಳೂರು ಉತ್ತರ ವಲಯ–1 ಈ ಕಛೇರಿಯ ಹೆಸರಿನಲ್ಲಿ ಸಲ್ಲಿಸಲಾದ ಲಕ್ಷಾಂತರ ರೂ. ಮೌಲ್ಯದ ಅನುದಾನಿತ ಶಿಕ್ಷಣ ಸಂಸ್ಥೆಗಳ ವೇತನಾನುದಾನ ಬಿಲ್‌ಗಳನ್ನು ಸರಿಯಾದ ಪರಿಶೀಲನೆ ನಡೆಸದೇ ಪಾಸ್ ಮಾಡಿ ಸರ್ಕಾರದ ಲಕ್ಷಾಂತರ ರೂ.ಗಳು ಅನರ್ಹರ ಪಾಲಾಗಲು ಸಹಕರಿಸಿ, 1999–2001ರ ಅವಧಿಯಲ್ಲಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿದ ಆರೋಪಕ್ಕಾಗಿ ಇತರರೊಡನೆ ಶ್ರೀ ಕೆ.ಸಿ. ರಾಜನ್, ಉಪ ನಿರ್ದೇಶಕರು, ಖಜಾನೆ ಇಲಾಖೆ ಅವರನ್ನು ಮೇಲೆ (1)ರಲ್ಲಿ ಓದಲಾದ ದಿನಾಂಕ : 23–11–2001ರ ಸರ್ಕಾರಿ ಆದೇಶದಲ್ಲಿ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿತ್ತು. ಆನಂತರ ಇಲಾಖಾ ವಿಚಾರಣೆ ಬಾಕಿ ಇಟ್ಟು ಇತರರೊಡನೆ ಶ್ರೀ ಕೆ.ಸಿ. ರಾಜನ್, ಉಪ ನಿರ್ದೇಶಕರು, ಖಜಾನೆ ಇಲಾಖೆ ಅವರ ಅಮಾನತ್ತನ್ನು ಮೇಲೆ (2) ರಲ್ಲಿ ಓದಲಾದ ದಿನಾಂಕ : 20–8–2003ರ ಸರ್ಕಾರಿ ಆದೇಶದಲ್ಲಿ ರದ್ದುಪಡಿಸಿ ಅವರನ್ನು ಮತ್ತೆ ಸೇವೆಗೆ ತೆಗೆದುಕೊಳ್ಳಲಾಯಿತು. ಶ್ರೀ ಕೆ.ಸಿ. ರಾಜನ್, ಉಪ ನಿರ್ದೇಶಕರು, ಖಜಾನೆ ಇಲಾಖೆ ಇವರು ದಿನಾಂಕ : 31–12–2010ರಂದು ವಯೋ ನಿವೃತ್ತಿ ಹೊಂದಿರುವರು. ಆನಂತರ ನಡೆದ ಪರಿಶೀಲನೆಯಿಂದಾಗಿ ಆರೋಪಿತ ಅಕ್ರಮಗಳಲ್ಲಿ ಈ ಅಧಿಕಾರಿಯ ಪಾತ್ರ ಇಲ್ಲದಿರುವುದು ಕಂಡು ಬಂದ ಕಾರಣ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಹೂಡಲಿಲ್ಲ. ಈ ಅಂಶಗಳನ್ನು ಪರಿಶೀಲಿಸಿದ ಸರ್ಕಾರವು ಅವರ ಅಮಾನತ್ತಿನ ಅವಧಿಯನ್ನು ಇತ್ಯರ್ಥ ಪಡಿಸಲು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 67 ಆಖಇ 2001, ಬೆಂಗಳೂರು, ದಿನಾಂಕ : 15–11–2011**

ಸರ್ಕಾರವು ಶ್ರೀ ಕೆ.ಸಿ. ರಾಜನ್, ನಿವೃತ್ತ ಉಪ ನಿರ್ದೇಶಕರು, ಖಜಾನೆ ಇಲಾಖೆ ಅವರ ವಿರುದ್ಧ ಇಲಾಖಾ ವಿಚಾರಣೆ ಸಂಬಂಧ ದಿನಾಂಕ : 23–11–2001 ಹಾಗೂ 20–8–2003ರ ಸರ್ಕಾರಿ ಆದೇಶಗಳ ನಡುವೆ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಯ ನಿಯಮ 100(3)ರನ್ವಯ ಕರ್ತವ್ಯದ ಮೇಲೆ ಕಳೆದ ಅವಧಿಯೆಂದು ಪರಿಗಣಿಸುತ್ತದೆ. ಈ ಅವಧಿಯಲ್ಲಿ ಶ್ರೀ ಕೆ.ಸಿ. ರಾಜನ್, ನಿವೃತ್ತ ಉಪ ನಿರ್ದೇಶಕರು, ಖಜಾನೆ ಇಲಾಖೆ ಅವರು ಅಮಾನತ್ತಿನಲ್ಲಿ ಇರದೇ ಇದ್ದಲ್ಲಿ ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಡಳಿತ & ಮುಂಗಡ).

ಪಿ.ಆರ್. 2776

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಸಿ.ಜಿ. ಹರಿಹರ ಕುಮಾರ ದಾಸ ಕುರೂಪ, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರು ಭಾರತೀಯ ಸೇನೆಯಲ್ಲಿ ಸಲ್ಲಿಸಿದ ಹಿಂದಿನ ಸೇವೆಯನ್ನು ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯಿಂದ ಪರಿಗಣಿಸುವ ಬಗ್ಗೆ.

**ಓದಲಾಗಿದೆ :** ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರ ಪತ್ರ ಸಂಖ್ಯೆ : ಸಿಎಸ್ಎ 805 ಎಸ್‌ಪಿಎಫ್ 2010/29–12–2011.

**ಪ್ರಸ್ತಾವನೆ :**

ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಶ್ರೀ ಸಿ.ಜಿ. ಹರಿಹರ ಕುಮಾರ ದಾಸ ಕುರೂಪ, ಜಂಟಿ ನಿಯಂತ್ರಕರು ಇವರು ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಯಾಗಿ ಗ್ರೂಪ್–ಎ ಪತ್ರಾಂಕಿತ ಅಧಿಕಾರಿಯಾಗಿ ಆಯ್ಕೆಯಾಗಿ ರಾಜ್ಯ ಲೆಕ್ಕಪತ್ರ ಇಲಾಖೆಯಲ್ಲಿ ಸಹಾಯಕ ನಿಯಂತ್ರಕರಾಗಿ ದಿನಾಂಕ : 29–6–1991ರಂದು ಕರ್ತವ್ಯಕ್ಕೆ ಹಾಜರಾಗಿದ್ದು, ರಾಜ್ಯ ಲೆಕ್ಕಪತ್ರ ಇಲಾಖೆಗೆ ಸೇವೆಗೆ ಸೇರುವ ಮೊದಲು ದಿನಾಂಕ : 17–3–1972 ರಿಂದ 21–5–1982ರವರೆಗೆ ಮಿಲಿಟರಿಯಲ್ಲಿ ಸೇವೆ ಸಲ್ಲಿಸಿದ್ದು, ಸದರಿ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 219ಎ(ಎ) ರನ್ವಯ ನಿವೃತ್ತಿ ವೇತನಕ್ಕಾಗಿ ಅರ್ಹತಾ ದಾಯಕ ಸೇವೆ ಎಂದು ಪರಿಗಣಿಸುವ ಪ್ರಸ್ತಾವನೆ ಸಲ್ಲಿಸಿದ್ದಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಶ್ರೀ ಸಿ.ಜಿ. ಹರಿಹರ ಕುಮಾರ ದಾಸ ಕುರೂಪ, ಜಂಟಿ ನಿಯಂತ್ರಕರು ಇವರು ದಿನಾಂಕ : 17–3–1972 ರಿಂದ 21–5–1982 ರವರೆಗೆ ಮಿಲಿಟರಿಯಲ್ಲಿ ಸೇವೆ ಸಲ್ಲಿಸಿರುವುದರಿಂದ ಅವರ ಹಿಂದಿನ ಸೇವೆಯ ಬಗ್ಗೆ ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 23 ರಾಲೆಪ 2011, ಬೆಂಗಳೂರು, ದಿನಾಂಕ : 17–11–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 219ಎ(ಎ) ರನ್ವಯ ಶ್ರೀ ಸಿ.ಜಿ. ಹರಿಹರ ಕುಮಾರ ದಾಸ ಕುರೂಪ, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರು ರಾಜ್ಯ ಲೆಕ್ಕಪತ್ರ ಇಲಾಖೆಗೆ ಸೇರುವ ಮುನ್ನ ದಿನಾಂಕ : 17–3–1972 ರಿಂದ 21–5–1982 ರವರೆಗೆ ಭಾರತೀಯ ಸೇನೆಯಲ್ಲಿ ಸಲ್ಲಿಸಿರುವ ಸೇವೆಯನ್ನು ಸದರೀ ಅವಧಿಯ ಪಿಂಚಣಿ ಜವಾಬ್ದಾರಿಯನ್ನು ಸೇನಾ ಪ್ರಾಧಿಕಾರ ಭರಿಸುವ ಷರತ್ತಿಗೆ ಒಳಪಟ್ಟು ವಿಶ್ರಾಂತಿ ವೇತನ ಸೌಲಭ್ಯಗಳಿಗೆ ಮಾತ್ರ ಅರ್ಹತಾದಾಯಕ ಸೇವೆ ಎಂದು ಈ ಮೂಲಕ ಪರಿಗಣಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ಸೇವೆಗಳು) ವಿಭಾಗವು ದಿನಾಂಕ : 20–4–2011ರ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 508 ಸೇವೆಗಳು–3/11 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ)

ಪಿ.ಆರ್. 2777

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಶಿವಕುಮಾರ ಡಾಂಗೆ, ಪ್ರಥಮ ದರ್ಜೆ ಸಹಾಯಕ, ರಾಜ್ಯ ಲೆಕ್ಕಪತ್ರ ಇಲಾಖೆ ಅವರ ವಿರುದ್ಧ ಇಲಾಖಾ ವಿಚಾರಣೆ ; ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ. ಆಇ 47 ರಾಲೆಪ 2006, ದಿನಾಂಕ : 18–1–2011.
2. ಶ್ರೀ ನಿಸಾರ್ ಅಹ್ಮದ್ ಪಟವೇಗಾರ್, ಜಂಟಿ ನಿಯಂತ್ರಕರು ಹಾಗೂ ಮುಖ್ಯ ಲೆಕ್ಕಾಧಿಕಾರಿ ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಅವರ ಪತ್ರ ಸಂಖ್ಯೆ : ಜಿಪಗು/ಮುಲೆಅ/ಇ.ವಿ./2011–12/140, ದಿನಾಂಕ : 13/14–6–2011.
3. ನೋಟೀಸ್ ಸಂಖ್ಯೆ : ಆಇ 47 ರಾಲೆಪ 2006, ದಿನಾಂಕ : 30–6–2011.
4. ಶ್ರೀ ಶಿವಕುಮಾರ ಡಾಂಗೆ, ಪ್ರಥಮ ದರ್ಜೆ ಸಹಾಯಕ, ರಾಜ್ಯ ಲೆಕ್ಕಪತ್ರ ಇಲಾಖೆ ಅವರ ಉತ್ತರ ದಿನಾಂಕ : 5–9–2011.

**ಪ್ರಸ್ತಾವನೆ :**

ಬೀದರ್ ಜಿಲ್ಲಾ ಪಂಚಾಯತ್‌ನಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಮಾರ್ಚ್ 2005ರಲ್ಲಿ ನಗದೀಕರಿಸಿದ ಜೆರಾಕ್ಸ್ ಯಂತ್ರದ ಖರೀದಿ ಮೊತ್ತ ರೂ. 98,506/–ಗಳನ್ನು ಕಂಪನಿಗೆ ಪಾವತಿಸದೇ ದಿನಾಂಕ : 22–10–2005 ರವರೆಗೂ ತನ್ನಲ್ಲೇ ಇಟ್ಟುಕೊಂಡಿದ್ದ ; ಕಛೇರಿಯ ವಾಹನಕ್ಕೆ 2005ರ ಏಪ್ರಿಲ್‌ನಿಂದ ಆಗಸ್ಟ್‌ವರೆಗೆ ಇಂಧನ ಸರಬರಾಜು ಮಾಡಿದ 5 ಬಿಲ್‌ಗಳ ಮೊತ್ತ ರೂ. 76,003/– ಗಳನ್ನು ಡ್ರಾ ಮಾಡಿ ಪಾವತಿಸದೇ ಇಂಧನ ದೊರೆಯದ ಸ್ಥಿತಿ ಉಂಟು ಮಾಡಿದ ; ಕಚೇರಿ ಮತ್ತು ಅಧಿಕಾರಿಗಳ ನಿವಾಸದ ದೂರವಾಣಿ ಬಿಲ್‌ಗಳನ್ನು ಡಿ.ಸಿ. ಬಿಲ್ ಮೂಲಕ ಪಾವತಿಸದೇ ದೂರವಾಣಿ ಸಂಪರ್ಕಗಳು ಕಡಿತಗೊಳ್ಳಲು ಕಾರಣರಾದ ; ಜಿಲ್ಲಾ ಪಂಚಾಯತ್ ನ್ಯಾಯವಾದಿಗಳ ರಿಟೇನರ್ ಫೀಗಳನ್ನು ಪಾವತಿಸುವಂತೆ ಹೊರಡಿಸಲಾದ ಆದೇಶವನ್ನು ಅನುಷ್ಠಾನಗೊಳಿಸಲು ವಿಫಲರಾದ ; ಜಿಲ್ಲಾ ಪಂಚಾಯತ್ ಊಟೋಪಚಾರ, ಲೇಖನ ಸಾಮಗ್ರಿಗಳ ಖರೀದಿ, ವಾಹನ ದುರಸ್ತಿ ಇತ್ಯಾದಿಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡಿದ್ದರೂ ಸಹ ಅವುಗಳನ್ನು ಪಾವತಿಸದೇ ಉಳಿದ ; ನಿವೃತ್ತಿ ಹೊಂದುತ್ತಿರುವ ತಮ್ಮ ಬೇಬಾಕಿ ಪತ್ರಕ್ಕೆ ತಾವೇ ಸಹಿ ಹಾಕಿಕೊಂಡ ; ವರ್ಷಾನುಗಟ್ಟಲೇ ನಗದು ಪುಸ್ತಕವನ್ನು ಬರೆಯದೇ ಹಾಗೂ ಬರೆಯುವುದನ್ನು ಉಸ್ತುವಾರಿ ವಹಿಸದೇ ಜಿಲ್ಲಾ ಪಂಚಾಯತ್‌ನ ನಿಧಿಯನ್ನು ತಾತ್ಕಾಲಿಕವಾಗಿ ದುರುಪಯೋಗ ಪಡಿಸಿಕೊಂಡ ಆರೋಪಗಳಿಗಾಗಿ ಇನ್ನೊಬ್ಬರೊಡನೆ ಶ್ರೀ ಶಿವಕುಮಾರ ಡಾಂಗೆ ಪ್ರಥಮ ದರ್ಜೆ ಸಹಾಯಕರು (6ನೇ ಆರೋಪ ಹೊರತುಪಡಿಸಿ), ರಾಜ್ಯ ಲೆಕ್ಕಪತ್ರ ಇಲಾಖೆ ಅವರ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿನಾಂಕ : 18–1–2011ರ ಸರ್ಕಾರಿ ಆದೇಶದಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಶ್ರೀ ನಿಸಾರ್ ಅಹ್ಮದ್ ಪಟವೇಗಾರ, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ದಿನಾಂಕ : 13–6–2011ರ ವಿಚಾರಣಾ ವರದಿ ಸಲ್ಲಿಸಿ ಆರೋಪಗಳ ಕುರಿತಂತೆ ಈ ಕೆಳಕಂಡ ನಿರ್ಣಯ ನೀಡಿದರು : "ಝುರಾಕ್ಸ್ ಯಂತ್ರ ಸರಬರಾಜು ಮಾಡಿದ ಮೊತ್ತ ರೂ. 98,506/–ಗಳನ್ನು ನಗದು ಪುಸ್ತಕದ ಪುಟ 41ರನ್ವಯ ದಿನಾಂಕ : 29–3–2005 ರಂದು ಆರೋಪಿಗಳು ಡ್ರಾ ಮಾಡಿದ್ದಾರೆ. ಸದರೀ ಮೊತ್ತದ ಪೈಕಿ ರೂ. 88,507/–ಗಳನ್ನು ಬೆಂಗಳೂರಿನ ಮೋದಿ ಝುರಾಕ್ಸ್ ಕಂಪನಿಗೆ ನಗದು ಪುಸ್ತಕ ಪುಟ ಸಂಖ್ಯೆ 81ರನ್ವಯ ದಿನಾಂಕ : 30–11–2005 ರಂದು ಪಾವತಿಸಿದ್ದಾರೆ. 8 ತಿಂಗಳು ತಮ್ಮಲ್ಲೇ ಉಳಿಸಿಕೊಂಡು ನಂತರವೂ ರೂ. 9999/–ಗಳನ್ನು ಪಾವತಿಸದೇ ಕಛೇರಿಯಲ್ಲೇ ಉಳಿದಿದೆ. ಇದು ತಾತ್ಕಾಲಿಕ ದುರುಪಯೋಗ ಆಗಿದ್ದು ಒಂದನೇ ಆರೋಪ ಸಾಬೀತಾಗಿದೆ ; ವಿಳಂಬವಾಗಿ ಪಾವತಿಸಿದ ವಾಹನ ಸಂಖ್ಯೆ :ಎಂವೈಐ 8282ರ 5 ಬಿಲ್‌ಗಳನ್ನು ಹಾಗೂ ಕಛೇರಿ, ಅಧಿಕಾರಿಗಳ ನಿವಾಸಗಳ ದೂರವಾಣಿ ಬಿಲ್ ಪಾವತಿಗೆ ಸಂಬಂಧಿಸಿದ ಕಡತಗಳು ಹಾಗೂ ಇತರ ದಾಖಲೆಗಳನ್ನು ವಿಚಾರಣೆಗೆ ಹಾಜರುಪಡಿಸಲಿಲ್ಲ. ಇದರಿಂದಾಗಿ ಜವಾಬ್ದಾರಿ ನಿಗದಿಪಡಿಸಲು ಸಾಧ್ಯವಿಲ್ಲ. ಎರಡು ಹಾಗೂ ಮೂರನೇ ಆರೋಪಗಳು ಸಾಬೀತಾಗಿಲ್ಲ ; ಶ್ರೀ ಜಿ.ಆರ್. ರಾಮಚಂದ್ರ ನ್ಯಾಯವಾದಿಗಳ ರಿಟೇನರ್ ಫೀ ಪೈಕಿ ರೂ. 6000/–ಗಳನ್ನು ದಿನಾಂಕ : 9–3–2005 ರಂದು ರೂ. 4000/– ಗಳನ್ನು ದಿನಾಂಕ : 22–6–2005ರಂದು ಒಟ್ಟು ರೂ. 10,000/–ಗಳನ್ನು ನಗದು ಪುಸ್ತಕದ ಪುಟ ಸಂಖ್ಯೆ 36 ಮತ್ತು 52ರ ಪ್ರಕಾರ ಡ್ರಾ ಮಾಡಲಾಗಿದೆ. ಆದರೆ ಅವರಿಗೆ ಪಾವತಿ ಮಾಡಿರುವುದಿಲ್ಲ. ಶ್ರೀಮತಿ ಟಿ.ಎನ್. ಮಂಜುಳಾದೇವಿ, ನ್ಯಾಯವಾದಿಗಳ 2005ರ ಮೇ ರಿಂದ ಜುಲೈ ವರೆಗಿನ ರಿಟೇನರ್ ಫೀ ಮೊತ್ತವನ್ನು ದಿನಾಂಕ : 19–9–2005 ರಂದು ನಗದು ಪುಸ್ತಕ ಪುಟ ಸಂಖ್ಯೆ : 71 ರನ್ವಯ ಡ್ರಾ ಮಾಡಿ ವಿಳಂಬವಾಗಿ ಪಾವತಿಸಲಾಗಿದೆ. ಆದ್ದರಿಂದ 4ನೇ ಆರೋಪವು ಸಾಬೀತಾಗಿದೆ ; ವಿವಿಧ ಬಿಲ್‌ಗಳಿಗೆ ಸಂಬಂಧಿಸಿದ ಚೆಕ್ ಸಂಖ್ಯೆ ಹಾಗೂ ವಿವರಗಳ ಪಟ್ಟಿಯನ್ನು ಮಾತ್ರ ವಿಚಾರಣೆಗೆ ಹಾಜರುಪಡಿಸಲಾಗಿದೆ. ಆರೋಪದಲ್ಲೂ ಸಹ ಎಷ್ಟು ದಿನ ವಿಳಂಬವಾಗಿ ಪಾವತಿಸಲಾಯಿತು ಎಂಬ ಬಗ್ಗೆ ಸ್ಪಷ್ಟ ಉಲ್ಲೇಖ ಇಲ್ಲ. ಇದರಿಂದಾಗಿ ವಿಳಂಬವಾಗಿ ಪಾವತಿಸಿದ ಹಾಗೂ ಪಾವತಿಸದೇ ಇರುವ ಬಿಲ್‌ಗಳ ವಿವರ, ಮೊತ್ತ ಇತ್ಯಾದಿಗಳ ಬಗ್ಗೆ ನಿಖರ ಮಾಹಿತಿ ದೊರೆಯುವುದಿಲ್ಲ. ಆದ್ದರಿಂದ 5ನೇ ಆರೋಪ ಸಾಬೀತಾಗಿರುವುದಿಲ್ಲ ; ಮಂಡನಾಧಿಕಾರಿಗಳಿಂದ ಹಾಜರು ಪಡಿಸಲ್ಪಟ್ಟ ದಾಖಲಾತಿಗಳನ್ನು ಆರೋಪಿಯು ನೋಡಿದ್ದು 8 ತಿಂಗಳ ಹಿಂದೆ ವಿವಿಧ ಬಾಬ್ತುಗಳಲ್ಲಿ ಡ್ರಾ ಮಾಡಿ ಪಾವತಿ ಆಗದೇ ಉಳಿದ ರೂ. 3,47,920/– ಶಿಲ್ಕು ಇರುವುದನ್ನು ಹಾಗೂ ಒಂದು ವರ್ಷದಿಂದ ನಗದು ಪುಸ್ತಕದಲ್ಲಿ ನಮೂದುಗಳನ್ನು ಮಾಡದೇ ಇರುವುದನ್ನು ಆರೋಪಿಯು ಒಪ್ಪಿಕೊಂಡಿದ್ದಾರೆ. ಈ ಮೊತ್ತವು ಜಿಲ್ಲಾ ಪಂಚಾಯತ್‌ನ ಮಾಜಿ ಅಧ್ಯಕ್ಷ/ಉಪಾಧ್ಯಕ್ಷರ ಗೌರವಧನ, ಪ್ರಯಾಣ ಭತ್ಯೆ, ಖಾಯಂ ಮುಂಗಡ ಶಿಲ್ಕು, ಎ.ಸಿ.ಬಿಲ್ ಮೊತ್ತ ಹಾಗೂ ಖಜಾನೆಯಿಂದ ಡ್ರಾ ಮಾಡಿ ಸಂಬಂಧಿಸಿದವರಿಗೆ ಪಾವತಿಸದೇ ಇರುವ ಮೊತ್ತಗಳನ್ನು ಒಳಗೊಂಡಿದೆ. ಆದ್ದರಿಂದ 6ನೇ ಆರೋಪ ಸಾಬೀತಾಗಿದೆ".

ಮೇಲಿನ ವಿಚಾರಣಾ ವರದಿಯ ಪ್ರತಿಯನ್ನು ಲಗತ್ತಿಸಿ ಶ್ರೀ ಶಿವಕುಮಾರ ಡಾಂಗೆ, ಪ್ರಥಮ ದರ್ಜೆ ಸಹಾಯಕ, ರಾಜ್ಯ ಲೆಕ್ಕಪತ್ರ ಇಲಾಖೆ ಅವರಿಗೆ ಮೇಲೆ (3)ರಲ್ಲಿ ಓದಲಾದ ದಿನಾಂಕ : 4-7-2011ರ ಎರಡನೇ ನೋಟೀಸ್ ನೀಡಿ ವಿಚಾರಣಾಧಿಕಾರಿಗಳ ನಿರ್ಣಯ ಕುರಿತು ಅಹವಾಲು ಏನಾದರೂ ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ಈ ನೋಟೀಸ್‌ಗೆ ಶ್ರೀ ಶಿವಕುಮಾರ ಡಾಂಗೆ ಅವರು ಮೇಲೆ (4)ರಲ್ಲಿ ಓದಲಾದ ದಿನಾಂಕ : 5-9-2011 ರಂದು ಉತ್ತರ ಸಲ್ಲಿಸಿ 2005ರ ಮಾರ್ಚ್‌ನಲ್ಲಿ ಬಜೆಟ್ ಲ್ಯಾಪ್ಸ್ ಆಗಬಾರದೆಂಬ ಕಾರಣದಿಂದ ಜೆರಾಕ್ಸ್ ಯಂತ್ರ ಖರೀದಿಸಲು ಆಡಳಿತಾತ್ಮಕ ಮಂಜೂರಾತಿ ನೀಡಿ ರೂ. 98,506/-ಗಳನ್ನು ಡ್ರಾ ಮಾಡಲಾಯಿತು. ಕಂಪನಿಯು ಯಂತ್ರವನ್ನು ಸರಬರಾಜು ಮಾಡಿದ ನಂತರ ಹಣ ಪಾವತಿ ಮಾಡಲಾಯಿತು. ಆದ್ದರಿಂದ ಹಣ ದುರುಪಯೋಗ ಆಗಿಲ್ಲವೆಂದು ತಿಳಿಸಿದ್ದಾರೆ. ನ್ಯಾಯವಾದಿಗಳು ರಿಟೇನರ್ ಫೀ ಪಾವತಿಗಾಗಿ ಒಂದೇ ಬಾರಿ ಬಿಲ್ ಸಲ್ಲಿಸಿದ ಕಾರಣ ಆಗ ಹಣವನ್ನು ಡ್ರಾ ಮಾಡಲಾಯಿತು. ಪ್ರತಿ ತಿಂಗಳೂ ಸಲ್ಲಿಸಿದ್ದಲ್ಲಿ ಆಗಲೇ ಡ್ರಾ ಮಾಡಲಾಗುತ್ತಿತ್ತು ಎಂದು ತಿಳಿಸಿದ್ದಾರೆ. ಹುದ್ದೆಗೆ ತಾನು ಹೊಸದಾಗಿ ನೇಮಕಗೊಂಡ ಕಾರಣ ನಗದು ಪುಸ್ತಕ ನಿರ್ವಹಣೆ ಬಗ್ಗೆ ಅನುಭವ ಇರಲಿಲ್ಲ. ಹೀಗಾಗಿ ಕೆಲವು ತಪ್ಪು ಸಂಭವಿಸಿರಬಹುದು. ಡ್ರಾ ಮಾಡಿದ ಒಟ್ಟು ರೂ. 3,47,920/-ಗಳ ಪೈಕಿ ನನ್ನ ಅವಧಿಗೆ ಸಂಬಂಧಿಸಿದ ರೂ. 1,81,715/-ಗಳನ್ನು ತುಂಬಿದ್ದೇನೆ. ಉದ್ದೇಶಪೂರ್ವಕವಾಗಿ ಯಾವ ತಪ್ಪಾಗಲೀ ವಿಳಂಬವಾಗಲೀ ಉಂಟಾಗದ ಕಾರಣ ತಮ್ಮನ್ನು ವಿಚಾರಣೆಯಿಂದ ಬಿಡುಗಡೆ ಮಾಡಲು ಕೋರಿದ್ದಾರೆ.

ಆರೋಪಿಯ ವಿವರಣೆಯಿಂದಾಗಿ ದಾಖಲೆಗಳೊಡನೆ ಪ್ರಕರಣವನ್ನು ಮತ್ತೆ ಪರಿಶೀಲಿಸಲಾಗಿದೆ. ಆರೋಪಿಯು ಈಗ ಪ್ರಸ್ತಾಪಿಸಿರುವ ಯಾವುದೇ ಅಂಶವನ್ನು ವಿಚಾರಣಾದಿಕಾರಿಗಳ ಮುಂದೆ ವಿಚಾರಣೆ ಸಮಯದಲ್ಲಿ ಪ್ರಸ್ತಾಪಿಸಿರಲಿಲ್ಲ. ಹುದ್ದೆಗೆ ಹೊಸದಾಗಿ ಸೇರಿದ್ದ ಹಾಗೂ ಲೆಕ್ಕಪತ್ರಗಳ ನಿರ್ವಹಣೆಯಲ್ಲಿ ಅನುಭವ ಇಲ್ಲದ ಕಾರಣ ತಪ್ಪಾಗಿದೆ ಎಂದು ಒಪ್ಪಿಕೊಳ್ಳುತ್ತಾರೆ. ಅವರ ಭಾಗದ ನಷ್ಟದ ಮೊತ್ತ ರೂ. 1,81,715/-ಗಳನ್ನು ತುಂಬಿದ್ದೇನೆ ಎಂದು ನಿವೇದಿಸುತ್ತಾರೆ. ಈ ಎಲ್ಲಾ ಅಂಶಗಳನ್ನೂ ಪರಿಶೀಲಿಸಿದಲ್ಲಿ ಎರಡನೇ ನೋಟೀಸ್‌ಗೆ ಆರೋಪಿಯು ನೀಡಿರುವ ಹೇಳಿಕೆಗಳು 1,4 ಮತ್ತು 6ನೇ ಆರೋಪಗಳು ಸಾಬೀತಾಗಿವೆ ಎಂಬ ವಿಚಾರಣಾಧಿಕಾರಿಗಳ ನಿರ್ಣಯಕ್ಕೆ ಪೂರಕವಾಗಿಯೇ ಇವೆ. ಆರೋಪಿಯು ಯಾವುದನ್ನು ಪ್ರಮಾದವಶಾತ್ ತಮ್ಮಿಂದ ಉಂಟಾದ ತಪ್ಪು ಎಂದು ಬಣ್ಣಿಸುತ್ತಾರೋ ಅವು ವಾಸ್ತವದಲ್ಲಿ ಅಕ್ರಮಗಳಾಗಿವೆ ಹಾಗೂ ತಾತ್ಕಾಲಿಕ ಹಣ ದುರುಪಯೋಗ ಸಾಬೀತಾದ ಪ್ರಕರಣಗಳಾಗಿವೆ. ವಿಚಾರಣೆಯು ಸಮರ್ಪಕವಾಗಿ ನಡೆದಿದೆ. ಆರೋಪಿಗೆ ವಿಪುಲವಾದ ಅವಕಾಶವನ್ನು ವಿಚಾರಣಾಧಿಕಾರಿಗಳು ನೀಡಿದ್ದಾರೆ. ಆದ್ದರಿಂದ ಆರೋಪಿಯ ವಿವರಣೆಯನ್ನು ಒಪ್ಪಿಕೊಳ್ಳದೇ 1,4 ಮತ್ತು 6ನೇ ಆರೋಪಗಳು ಸಾಬೀತಾಗಿವೆ ಎಂಬ ವಿಚಾರಣಾಧಿಕಾರಿಗಳ ನಿರ್ಣಯವನ್ನು ಒಪ್ಪಿಕೊಂಡ ಸರ್ಕಾರವು ದಂಡನೆ ವಿಧಿಸಲು ನಿರ್ಣಯಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 47 ರಾಲೆಪ 2006, ಬೆಂಗಳೂರು, ದಿನಾಂಕ : 21-11-2011.**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11, 11ಎ ರೊಡನೆ ಓದಿಕೊಂಡಂತೆ ಅದೇ ನಿಯಮಾವಳಿಯ ನಿಯಮ 8 (ivಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಶಿವಕುಮಾರ ಡಾಂಗೆ, ಪ್ರಥಮ ದರ್ಜೆ ಸಹಾಯಕ, ರಾಜ್ಯ ಲೆಕ್ಕಪತ್ರ ಇಲಾಖೆ ಅವರ ವೇತನವನ್ನು ವೇತನ ಶ್ರೇಣಿ ರೂ. 7275-175-7800-200-8600-225-9500-250-10500-300-12300-350-13350 ರಲ್ಲಿ ಪ್ರಸ್ತುತ ಪಡೆಯುತ್ತಿರುವ ರೂ. 7450/- ರಿಂದ ರೂ. 7275/-ಕ್ಕೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ 5 ವರ್ಷಗಳ ಅವಧಿಗೆ ಇಳಿಸುತ್ತದೆ.

ದಂಡನೆ ಅವಧಿಯಲ್ಲಿ ಅವರ ವೇತನವು ಸ್ಥಿರವಾಗಿರುತ್ತದೆ ಹಾಗೂ ಅವರು ಯಾವುದೇ ವೇತನ ಬಡ್ತಿಯನ್ನು ಪಡೆಯುವುದಿಲ್ಲ.

ಈ ದಂಡನೆಯು ಅವರ ಮುಂದಿನ ವಾರ್ಷಿಕ ವೇತನ ಬಡ್ತಿಗಳನ್ನು ಮುಂದೂಡುವ ಪರಿಣಾಮ ಬೀರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಶಿವರಾಮ್**

ಸರ್ಕಾರ ಅಧೀನ ಕಾರ್ಯದರ್ಶಿ,

ಪಿ.ಆರ್. 2778 ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ವಿ. ವೆಂಕಟರಮಣ, ಪತ್ರಾಂಕಿತ ಉಪ ಖಜಾನಾಧಿಕಾರಿ, ಖಜಾನೆ ಅವರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲು ಲೋಕಾಯುಕ್ತ ಪೊಲೀಸರಿಗೆ ಸರ್ಕಾರದ ಮಂಜೂರಾತಿ ; ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ. ಆಇ 07 ಆಖಇ 2011, ದಿನಾಂಕ : 20-9-2011.

2. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ (ಜಿ)/ಎಂ-38/ಸಿಆರ್ 13/2010 ಮಂಗಳೂರು, ದಿನಾಂಕ: 29-9-2011.

**ಪ್ರಸ್ತಾವನೆ :**

ಶ್ರೀ ವಿ. ವೆಂಕಟರಮಣ, ಪತ್ರಾಂಕಿತ ಉಪ ಖಜಾನಾಧಿಕಾರಿ, ಉಪ ಖಜಾನೆ, ಪುತ್ತೂರು ಇವರು ಸೇವೆಯಲ್ಲಿದ್ದಾಗಲೇ ನಿಧನರಾದ ಸರ್ಕಾರಿ ಸಂಯುಕ್ತ ಪದವಿ ಪೂರ್ವ ಕಾಲೇಜು, ಕಡಬ ಪುತ್ತೂರು ಇವರ ವೃತ್ತಿ ಶಿಕ್ಷಕ ಶ್ರೀ ಗುರುರಾಜಪ್ಪ ಎಂಬುವವರ ನಿವೃತ್ತಿ ಸೌಲಭ್ಯಗಳ ಚೆಕ್‌ಗಳನ್ನು ಅವರ ವಾರಸುದಾರರಿಗೆ ನೀಡಲು ರೂ. 2500/-ಗಳ ಅಕ್ರಮ ಸಂಭಾವನೆ ಪಡೆಯುತ್ತಿದ್ದಾಗಲೇ ದಿನಾಂಕ : 13-12-2010ರಂದು ಲೋಕಾಯುಕ್ತ ಪೊಲೀಸರಿಗೆ ಸಿಕ್ಕಿಬಿದ್ದಿದ್ದು ಈ ಕಾರಣಕ್ಕಾಗಿ ಅವರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲು ಮೇಲೆ (1) ರಲ್ಲಿ ಓದಲಾದ ದಿನಾಂಕ : 20-9-2011ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಲೋಕಾಯುಕ್ತ ಪೊಲೀಸರಿಗೆ ಸರ್ಕಾರದ ಮಂಜೂರಾತಿ ನೀಡಲಾಗಿತ್ತು. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ (2) ರಲ್ಲಿ ಓದಲಾದ ದಿನಾಂಕ : 29-9-2011ರ ಪತ್ರದಲ್ಲಿ ಶ್ರೀ ವಿ. ವೆಂಕಟರಮಣ, ಪತ್ರಾಂಕಿತ ಉಪ ಖಜಾನಾಧಿಕಾರಿ, ಅವರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲು ಲೋಕಾಯುಕ್ತ ಪೊಲೀಸರಿಗೆ ಮಂಜೂರಾತಿ ನೀಡಲಾದ ದಿನಾಂಕ : 20-9-2011ರ ಸರ್ಕಾರಿ ಆದೇಶದಲ್ಲಿ ದಾಖಲಾತಿಗಳನ್ನು ಪರಿಶೀಲಿಸಿದ ಬಗ್ಗೆ

ಹಾಗೂ ಸಾಕ್ಷೀದಾರರ ಹೇಳಿಕೆಗಳನ್ನು ಪರಿಶೀಲಿಸಿದ ಬಗ್ಗೆ ವಿವರವಾಗಿ ನಮೂದಿಸಿರುವುದಿಲ್ಲ ಹಾಗೂ ಕಲಂ 19(1)(ಬಿ) ರನ್ವಯ ಮಂಜೂರಾತಿ ನೀಡಿಲ್ಲವೆಂದು ತಿಳಿಸಿ ಅದರಂತೆ ಪರಿಷ್ಕೃತ ಮಂಜೂರಾತಿ ಆದೇಶವನ್ನು ಹೊರಡಿಸುವಂತೆ ಕೋರಿದ್ದಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

ಅದರಂತೆ entrustment ಮಹಜರ್ ಪರಿಶೀಲಿಸಲಾಗಿ ಅದರಲ್ಲಿನ ಪಂಚರಾದ ಮಂಗಳೂರು ಪ್ರಾದೇಶಿಕ ಸಾರಿಗೆ ಕಚೇರಿಯ ಪ್ರಥಮ ದರ್ಜೆ ಸಹಾಯಕ ದೀಪಕ್ ಕುಮಾರ್ ಹಾಗೂ ಮಂಗಳೂರು ವಾಣಿಜ್ಯ ತೆರಿಗೆ ಇಲಾಖೆ ಜಂಟಿ ಆಯುಕ್ತರ ಕಚೇರಿಯ ದ್ವಿತೀಯ ದರ್ಜೆ ಸಹಾಯಕ ಶ್ರೀ ಟಿ. ಚಂದ್ರಹಾಸ ಅವರುಗಳು ಪಂಚ ಸಾಕ್ಷಿದಾರರಾಗಿ ದಿನಾಂಕ : 13–12–2010 ರಂದು ಪೂರ್ವಾಹ್ನ ಮಂಗಳೂರು ಲೋಕಾಯುಕ್ತ ಠಾಣೆಯಲ್ಲಿ ಹಾಜರಾದಾಗ ಅವರಿಗೆ ಇನ್ಸ್‌ಪೆಕ್ಟರ್ ಶ್ರೀ ಉದಯ ಎಂ. ನಾಯಕ್ ಅವರು ಫಿರ್ಯಾದಿ ಶ್ರೀ ಸಿ.ಜಿ. ಕೇಶವಮೂರ್ತಿ ಅವರನ್ನು ಪರಿಚಯಿಸಿ ಪ್ರಕರಣವನ್ನು ವಿವರಿಸುತ್ತಾರೆ. ಆ ವೇಳೆಗಾಗಲೇ ನ್ಯಾಯಾಲಯಕ್ಕೆ FIR ಸಲ್ಲಿಸಲ್ಪಟ್ಟಿರುತ್ತದೆ. ಶ್ರೀ ದೀಪಕ್ ಕುಮಾರ್ ಒಂದನೇ ಪಂಚರಾಗಿಯೂ ಶ್ರೀ ಪಿ. ಚಂದ್ರಹಾಸ ಎರಡನೇ ಪಂಚರಾಗಿಯೂ ನೇಮಕಗೊಳ್ಳುತ್ತಾರೆ. ಇದರ ತರುವಾಯ ಫಿರ್ಯಾದಿಯು ಆಪಾದಿತನಿಗೆ ಕೊಡಲು ತಂದಿದ್ದ ಒಂದು ಸಾವಿರ ರೂ. ಮುಖ ಬೆಲೆಯ ಒಂದು ಹಾಗೂ ಐದು ನೂರು ರೂ. ಮುಖ ಬೆಲೆಯ ಎರಡು ನೋಟುಗಳನ್ನು ಪರಿಶೀಲಿಸಿ ಎರಡನೇ ಪಂಚರು ರೂ. 1000 (8ಸಿಬಿ 878511) ರೂ. 500 (4ಸಿಇ 642490) ಮತ್ತು (7ವಿವಿ 276997) ಮುಖ ಬೆಲೆಯ ನೋಟುಗಳ ಸಂಖ್ಯೆಗಳನ್ನು ಬರೆದುಕೊಳ್ಳುತ್ತಾರೆ. ಫಿನಾಪ್ತಲಿನ ಪುಡಿಯನ್ನು ನೋಟುಗಳ ಎರಡೂ ಕಡೆ ಸವರಿ ಅದನ್ನು ಎರಡನೇ ಪಂಚರು ಫಿರ್ಯಾದಿಯ ಷರ್ಟ್ ಜೇಬಿನಲ್ಲಿಡುತ್ತಾರೆ. ಅದಕ್ಕೆ ಮುನ್ನ ಆಪಾದಿತನಿಗೆ ತೊಂದರೆ ಉಂಟು ಮಾಡುವ ಯಾವ ವಸ್ತುವೂ ಇಲ್ಲದಿರುವುದನ್ನು ಫಿರ್ಯಾದಿಯ ದೇಹ ಚೆಕ್ ಮಾಡಿ ಖಚಿತಪಡಿಸಿಕೊಳ್ಳುತ್ತಾರೆ. ಇನ್ನಷ್ಟು ಲಂಚ ಬೇಡಿದಲ್ಲಿ ಇರಲಿ ಎಂದು ಇನ್ನೊಂದು ರೂ. 500/–ಗಳ ನೋಟನ್ನು (7ಸಿಎಸ್ 520011) ಫಿರ್ಯಾದಿಯ ಪರ್ಸಿನಲ್ಲಿಟ್ಟು ಅದನ್ನು ಅವರ ಪ್ಯಾಂಟ್ ಜೇಬಿನಲ್ಲಿಡುತ್ತಾರೆ.

ಫಿನಾಪ್ತಲಿನ ಪೌಡರ್ ಲೇಪಿಸಿದ್ದ ನೋಟುಗಳನ್ನು ಫಿರ್ಯಾದಿಯ ಜೇಬಿನಲ್ಲಿಟ್ಟು ಎರಡನೇ ಪಂಚಸಾಕ್ಷಿ ಶ್ರೀ ಟಿ. ಚಂದ್ರಹಾಸರ ಕೈಬೆರಳನ್ನು ನೀರಿನ ಬಟ್ಟಲಲ್ಲಿ ತೊಳಿಸುವ ಹಾಗೂ ಆ ದ್ರಾವಣವು ಗುಲಾಬಿ ಬಣ್ಣಕ್ಕೆ ತಿರುಗಿದ್ದು ಅದನ್ನು ಬಾಟಲಿಯಲ್ಲಿ ಹಾಕಿ ಸೀಲ್ ಮಾಡುವ ಪ್ರಕ್ರಿಯೆ, ಬಳಸಲ್ಪಟ್ಟ ಫಿನಾಪ್ತಲಿನ್ ಪೌಡರ್‌ನ ಮಾದರಿಯನ್ನು ಒಂದು ಎನ್‌ವಲೋಪ್‌ನಲ್ಲಿ ಹಾಕಿ ಸೀಲ್ ಮಾಡುವ ಪ್ರಕ್ರಿಯೆ (ಆರ್ಟಿಕಲ್ ಮತ್ತು 2 ಗುರುತಿಸುವಿಕೆ) ಆದ ನಂತರ ಆಪಾದಿತರ ಕಛೇರಿಯ ಸಿಬ್ಬಂದಿ ಶ್ರೀ ಪ್ರಭು ಎಂಬುವರೊಡನೆ ಫಿರ್ಯಾದಿಯು ನಡೆಸಿದ ಮೊಬೈಲ್ ಸಂಭಾಷಣೆಯ ಸಿಡಿಯನ್ನು ಲ್ಯಾಪ್‌ಟಾಪ್‌ನಲ್ಲಿ ಹಾಕಿ ಅದರಲ್ಲಿ ಸೋಮವಾರ ಬನ್ನಿ ಅವರು ಒಂದೂವರೆ ಕೇಳಿಯಾರು ಎರಡು ಹೇಳಿಯಾರು ಎಂಬುದನ್ನು ಗಮನಿಸಿ ಮುಂದಿನ ತನಿಖೆಗಾಗಿ ಸಿ.ಡಿ. ಇಟ್ಟು ಕೊಳ್ಳುತ್ತಾರೆ. ಆರ್ಟಿಕಲ್ 1 ಮತ್ತು 2 ಸೀಲ್ ಮಾಡಲು ಉಪಯೋಗಿಸಿದ ಜೆ ಇಂಗ್ಲೀಷ್ ಅಕ್ಷರದ ಸೀಲ್‌ನ್ನು 2ನೇ ಪಂಚರಿಗೆ ನೀಡುತ್ತಾರೆ. ಆರೋಪಿಯೊಡನೆ ನಡೆಸುವ ಸಂಭಾಷಣೆಯನ್ನು ರೆಕಾರ್ಡ್ ಮಾಡಲು ಫಿರ್ಯಾದಿಗೆ ಐ.ಸಿ. ರೆಕಾರ್ಡ್ ಕೊಡುತ್ತಾರೆ. ಆಪಾದಿತನು ಬೇಡಿಕೆ ಸಲ್ಲಿಸಿದರೆ ಮಾತ್ರ ಫಿನಾಪ್ತಲಿನ್ ಪೌಡರ್ ಲೇಪಿಸಿದ ನೋಟುಗಳನ್ನು ನೀಡಬೇಕೆಂದು ಸೂಚಿಸಿ ಒಂದನೇ ಪಂಚರಿಗೆ ಫಿರ್ಯಾದಿಯೊಡನೆ ಆಪಾದಿತರ ಕಛೇರಿಗೆ ಹೋಗಿ ಫಿರ್ಯಾದಿ ಮತ್ತು ಆರೋಪಿತನ ನಡುವೆ ನಡೆಯುವ ವಿದ್ಯಮಾನ ಗಮನಿಸಲು ಸೂಚಿಸುತ್ತಾರೆ. ಫಿನಾಪ್ತಲಿನ್ ಪೌಡರ್ ಲೇಪಿತ ನೋಟನ್ನು ಆರೋಪಿಯು ಪಡೆದ ನಂತರ ತನ್ನ ಕೈಯಿಂದ ತಲೆಯನ್ನು ಸವರುವ ಮೂಲಕ ಸಂಜ್ಞೆ ಮಾಡಬೇಕೆಂದು ಫಿರ್ಯಾದಿಗೆ ಸೂಚಿಸಿ ಎಲ್ಲರೂ ತಮ್ಮ ಕೈಗಳನ್ನು, ತನಿಖಾ ಸಾಮಗ್ರಿಗಳನ್ನು ಸ್ವಚ್ಛವಾಗಿ ತೊಳೆದುಕೊಂಡು ವಹಿಸಿಕೊಡುವ ಮಹಜರಿನ Print out ತೆಗೆದುಕೊಳ್ಳುತ್ತಾರೆ.

ಸೊತ್ತು ಸ್ವಾಧೀನತಾ ಮಹಜರು ಪರಿಶೀಲಿಸಲಾಗಿ ದಿನಾಂಕ : 13–12–2010ರ ಮಧ್ಯಾಹ್ನ 12 ಗಂಟೆಗೆ ಮಂಗಳೂರು ಲೋಕಾಯುಕ್ತ ಪೊಲೀಸು ಠಾಣೆಯನ್ನು ಬಿಟ್ಟು ಇಲಾಖೆಯ ವಾಹನ ಸಂಖ್ಯೆ : ಕೆಎ01–ಜಿ4106 ಹಾಗೂ ಕೆಎ01–ಜಿ4683 ರಲ್ಲಿ ಹೊರಟು ಸುಮಾರು 1.20ಕ್ಕೆ ಪುತ್ತೂರು ತಾಲ್ಲೂಕು ಕಛೇರಿಗೆ ಸ್ವಲ್ಪ ದೂರದಲ್ಲಿ ನಿಲ್ಲಿಸಿ ಫಿರ್ಯಾದುದಾರರಿಗೆ ಐ.ಸಿ. ರೆಕಾರ್ಡರ್ ಆಪರೇಟ್ ಮಾಡುವ ವಿಧಾನ ತಿಳಿಸಿ ಫಿರ್ಯಾದಿ ಹಾಗೂ ಉಪ ಖಜಾನಾಧಿಕಾರಿಯವರ ನಡುವೆ ನಡೆಯುವ ವಿದ್ಯಮಾನವನ್ನು ಸ್ವಲ್ಪ ದೂರದಲ್ಲಿ ನಿಂತು ಗಮನಿಸುವಂತೆ ಒಂದನೇ ಪಂಚರಿಗೆ ಸೂಚನೆ ನೀಡಿ ಅದೇ ಸಮಯದಲ್ಲಿ ಅಲ್ಲಿಗೆ ಬಂದ ಫಿರ್ಯಾದಿಯ ತಾಯಿ ನಾಗರತ್ನಮ್ಮ ಅವರೊಡನೆ ಮೂವರನ್ನು ಇನ್ಸ್‌ಪೆಕ್ಟರ್ ಅವರು ಉಪ ಖಜಾನಾಧಿಕಾರಿಯ ಕಚೇರಿ ಒಳಗೆ ಕಳುಹಿಸುತ್ತಾರೆ. ಒಬ್ಬರು ಪೊಲೀಸು ನಿರೀಕ್ಷಕರು ಹಾಗೂ ಮೂವರು ಕಾನ್ಸ್ ಟೇಬಲ್‌ಗಳು ತಾಲ್ಲೂಕು ಕಚೇರಿ ಗೇಟ್‌ನ ಹೊರಗಡೆ ಅಲ್ಲಲ್ಲಿ ನಿಂತು ಗಮನಿಸುವಂತೆ ತಿಳಿಸಿ ತನಿಖಾಧಿಕಾರಿಯು ಎರಡನೇ ಪಂಚರೊಡನೆ ಗೇಟ್‌ನ ಒಳಗೆ ನಿಲ್ಲುತ್ತಾರೆ. ಮತ್ತೊಬ್ಬ ಪೊಲೀಸು ಇನ್ಸ್‌ಪೆಕ್ಟರ್ ಹಾಗೂ 3 ಮಂದಿ ಕಾನ್ಸ್‌ಟೇಬಲ್‌ಗಳನ್ನು ಕೇಂದ್ರ ಶಿರಸ್ತೇದಾರರು ಮತ್ತು ಉಪ ಬಂದಿಖಾನೆ ಅಧೀಕ್ಷಕರು ಎಂದು ಬರೆದಿರುವ ಕೊಠಡಿಯ ಎದುರು ಜಗುಲಿಯಲ್ಲಿ ಅಲ್ಲಲ್ಲಿ ನಿಂತು ಗಮನಿಸುವಂತೆ ನಿಗಧಿಪಡಿಸುತ್ತಾರೆ ಹಾಗೂ ಫಿರ್ಯಾದಿಯಿಂದ ಸೂಚನೆಗಾಗಿ ಕಾಯುತ್ತಾ ನಿಲ್ಲುತ್ತಾರೆ. ಸುಮಾರು ಮಧ್ಯಾಹ್ನ 2.20ಕ್ಕೆ ಫಿರ್ಯಾದುದಾರರು ಒಂದನೇ ಪಂಚರೊಡನೆ ಉಪ ಖಜಾನಾಧಿಕಾರಿಯವರ ಕಛೇರಿಯಿಂದ ಹೊರಬಂದು ಕೈಯಿಂದ ತಲೆಯನ್ನು ಸವರಿಕೊಂಡದ್ದನ್ನು ಗಮನಿಸಿದ ತನಿಖಾಧಿಕಾರಿಯವರು 2ನೇ ಪಂಚರು ಹಾಗೂ ಎಲ್ಲಾ ನಿಯೋಜಿತ ಸಿಬ್ಬಂದಿಯೊಡನೆ ಅವರಲ್ಲಿ ಬಂದು ಏನಾಯಿತೆಂದು ಕೇಳಿದಾಗ ಫಿರ್ಯಾದಿಯು ಈ ಹಿಂದಿನ ಬೇಡಿಕೆಯಂತೆ ಉಪ ಖಜಾನಾಧಿಕಾರಿಯು ರೂ. 2000/– ಅಷ್ಟೇ ಅಲ್ಲದೇ ಇನ್ನೂ ಹೆಚಿನ ರೂ. 500/–ಗಳನ್ನು ಒಟ್ಟು ರೂ. 2500/– ಗಳನ್ನು ತನ್ನಿಂದ ಅವರ ಬಲಕೈನಲ್ಲಿ ಪಡೆದುಕೊಂಡು ಎರಡೂ ಕೈಗಳಲ್ಲಿ ಎಣಿಸಿ ಷರ್ಟಿನ ಎಡಭಾಗದ ಜೇಬಿನಲ್ಲಿ ಇಟ್ಟುಕೊಂಡರೆಂದು ತಿಳಿಸುತ್ತಾರೆ.

ತನಿಖಾಧಿಕಾರಿಯು ಆರೋಪಿಯನ್ನು ತೋರಿಸುವಂತೆ ಕೇಳಲಾಗಿ ಫಿರ್ಯಾದಿಯು ಉಪ ಖಜಾನಾಧಿಕಾರಿಯವರು ಕುಳಿತುಕೊಂಡಿದ್ದ ಕೊಠಡಿಯಲ್ಲಿ ಕುಳಿತಿದ್ದ ಒಬ್ಬ ವ್ಯಕ್ತಿಯನ್ನು ತೋರಿಸುತ್ತಾರೆ. ಪೊಲೀಸು ಇನ್ಸ್‌ಪೆಕ್ಟರ್ ಶ್ರೀ ಉದಯ ಎಂ. ನಾಯಕ್ ರವರು ಸದರಿ ವ್ಯಕ್ತಿಗೆ ತಮ್ಮ ಗುರುತಿನ ಪತ್ರ ತೋರಿಸಿ ಪರಿಚಯ ಮಾಡಿಕೊಂಡು ಫಿರ್ಯಾದುದಾರರ ದೂರಿನ ಬಗ್ಗೆ ತಿಳಿಸಿ ಅವರನ್ನು ದಸ್ತಗಿರಿ ಮಾಡಿರುವುದಾಗಿ ತಿಳಿಸಿರುತ್ತಾರೆ. ಅವರ ಸೂಚನೆಯಂತೆ ಆರೋಪಿಯ ಎಡಗೈಯನ್ನು ಹೆಡ್‌ಕಾನ್ಸ್‌ಟೇಬಲ್ ಶ್ರೀ ಸುದರ್ಶನ್ ಹಾಗೂ ಬಲಗೈಯನ್ನು ಇನ್ಸ್‌ಪೆಕ್ಟರ್ ಶ್ರೀ ದೀಲೀಪ್ ಕುಮಾರ್ ಹಿಡಿದುಕೊಳ್ಳುತ್ತಾರೆ. ನಂತರ ಹೆಸರನ್ನು ಕೇಳಲಾಗಿ ಆರೋಪಿಯು ಶ್ರೀ ವಿ. ವೆಂಕಟರಮಣ ನಾಯಕ್, ತಂದೆ ಶಿವಪ್ಪ ನಾಯಕ್, ಪತ್ರಾಂಕಿತ ಉಪ ಖಜಾನಾಧಿಕಾರಿ, ಪುತ್ತೂರು ; ವಾಸ ಬೆಳ್ತಂಗಡಿ ತಾಲ್ಲೂಕು ; ಮೇಲಂತ ಬೆಟ್ಟು, ದೇವಿಕೃಪ ನಿವಾಸಿ ಎಂದು ತಿಳಿಸುತ್ತಾರೆ. ಆತನ ಎದುರು ಒಬ್ಬ ವ್ಯಕ್ತಿ ಕುಳಿತಿದ್ದು ಆತನನ್ನು ಹೆಸರು ಕೇಳಲಾಗಿ ತನ್ನ ಹೆಸರು ಅಶೋಕ್ ಪೂಂಜಾ, ಆರೋಪಿಯ ಗೆಳೆಯ ಎಂದು ತಿಳಿಸುತ್ತಾರೆ. ಆತನಿಗೆ ಅಲ್ಲಿಯೇ ಕುಳಿತು ಕೊಳ್ಳುವಂತೆ ತಿಳಿಸಲಾಗುತ್ತದೆ. ಶ್ರೀ ವಿ. ವೆಂಕಟರಮಣ ಅವರ ದಸ್ತಗಿರಿ ವಿಷಯವನ್ನು ದೂರವಾಣಿ ಮೂಲಕ ಜಿಲ್ಲಾ ಖಜಾನಾಧಿಕಾರಿಗೆ ತಿಳಿಸಲಾಗುತ್ತದೆ.

ಹಾಗೇಯೇ ಅದೇ ಕಛೇರಿಯ ಎರಡನೇ ದರ್ಜೆ ಸಹಾಯಕ ಶ್ರೀ ವಿಶ್ವನಾಥ ಪ್ರಭು ಅವರಿಗೆ ತಿಳಿಸಲಾಗುತ್ತದೆ. ತನಿಖಾಧಿಕಾರಿಯು ಘಟನೆಯ ಬಗ್ಗೆ ಫಿರ್ಯಾದಿಯನ್ನು ಕೇಳಲಾಗಿ ಅವರು ವಿವರಿಸಿರುವಂತೆ ಅದು ಮುಂದಿನಂತಿದೆ.

ಫಿರ್ಯಾದಿಯು ಅವರ ತಾಯಿ ಮತ್ತು ಒಂದನೇ ಪಂಚರೊಡನೆ ಉಪ ಖಜಾನಾಧಿಕಾರಿಯವರ ಕಚೇರಿಯ ಒಳಗೆ ಹೋಗುತ್ತಾರೆ. ಒಂದನೇ ಪಂಚರನ್ನು ಉಪ ಖಜಾನಾಧಿಕಾರಿಯ ಕೊಠಡಿಯ ಹೊರಗಡೆ ಕುರ್ಚಿಯಲ್ಲಿ ಕೂರಿಸಿ ಫಿರ್ಯಾದಿಯು ತನ್ನ ತಾಯಿಯೊಡನೆ ಕೊಠಡಿಯ ಒಳಗೆ ಹೋಗಿ ಪೆನ್ಷನ್ ಮತ್ತು ಜಿ.ಪಿ.ಎಫ್ ಹಣದ ಮಂಜೂರಾತಿಯ ಚೆಕ್‌ನ ಬಗ್ಗೆ ವಿಚಾರಿಸಿದಾಗ ಆಪಾದಿರತು ಕೈ ಸಂಜ್ಞೆಯಲ್ಲಿ ಅಕ್ರಮ ಹಣಕ್ಕೆ ಬೇಡಿಕೆಯೊಡ್ಡಿ ಕೊಡಿ ಎನ್ನುತ್ತಾರೆ. ಫಿರ್ಯಾದಿಯು ಎಷ್ಟು ಸಾರ್ ಎಂದಾಗ ಹೇಳಿಲ್ವಾ ಮೊನ್ನೆ ಎಷ್ಟು ಹೇಳಿದ್ದು ಎನ್ನಲು ಸ್ವಲ್ಪ ಕಡಿಮೆ ಮಾಡಿ ಎಂದು ಫಿರ್ಯಾದಿ ಕೋರುತ್ತಾರೆ. ಆಗ ಆಪಾದಿರತು ನಾನು ಚಿತ್ರದುರ್ಗದಲ್ಲಿದ್ದೆ. ಅಲ್ಲಿ ಜೇಬಿಗೆ ಕೈ ಹಾಕಿ ತೆಗೋಳ್ತಾರೆ ಎಂದಾಗ ಫಿರ್ಯಾದಿಯು ಅವರಲ್ಲಿದ್ದ ಲಂಚದ ಹಣ ರೂ. 2000/– ನ್ನು ನೀಡುತ್ತಾರೆ. ಆಪಾದಿತರು ಇನ್ನೂ ಒಂದು ಕೊಡಿ ಎಂದಾಗ ಫಿರ್ಯಾದಿಯು ಈಗ ಇಲ್ಲ ಎಂದು ಹೇಳಿ ತನ್ನಲ್ಲಿದ್ದ ಹೆಚ್ಚುವರಿ ಲಂಚದ ಹಣ ರೂ. 500/–ನ್ನು ನೀಡುತ್ತಾರೆ. ಅದನ್ನೂ ಪಡೆದ ಆಪಾದಿತರು ಅವರು ಹಾಕಿ ಕೊಂಡಿದ್ದ ಷರ್ಟಿನ ಎಡಭಾಗದ ಜೇಬಿನಲ್ಲಿ ಇಟ್ಟುಕೊಳ್ಳುತ್ತಾರೆ. ಆನಂತರ ಫಿರ್ಯಾದಿಯು ಅವರ ತಾಯಿಯೊಡನೆ ಉಪ ಖಜಾನಾಧಿಕಾರಿ ಕೊಠಡಿಯಿಂದ ಹೊರಬಂದು ಅವರ ತಾಯಿಯನ್ನು ಒಂದನೇ ಪಂಚರು ಕುಳಿತಿದ್ದ ಕುರ್ಚಿಯಲ್ಲಿ ಕೂರಿಸಿ ಒಂದನೆ ಪಂಚರೊಡನೆ ಕಚೇರಿಯ ಹೊರಬಂದು ತಾಲ್ಲೂಕು ಕಚೇರಿಯನ್ನು ಪ್ರವೇಶಿಸುವ ಮೆಟ್ಟಿಲ ಬಳಿಬಂದು ತಲೆಯನ್ನು ಬಲಗೈಯಿಂದ ಸವರುವ ಮೂಲಕ ಪೊಲೀಸರಿಗೆ ಸೂಚನೆ ನೀಡುತ್ತಾರೆ.

ಒಂದನೇ ಪಂಚರನ್ನು ತನಿಖಾಧಿಕಾರಿಯು ವಿಚಾರಿಸಿದಾಗಿ ಪೀರ್ಯಾದಿ ಹಾಗೂ ಅವರ ತಾಯಿಯೊಡನೆ ತಾನು ಉಪ ಖಜಾನಾಧಿಕಾರಿಯ ಕಚೇರಿಗೆ ಬಂದಾಗ ಫಿರ್ಯಾದಿಯು ತನ್ನನ್ನು ಪತ್ರಾಂಕಿತ ಉಪ ಖಜಾನಾಧಿಕಾರಿ ಎಂಬ ನಾಮಫಲಕ ಇರುವ ಕೊಠಡಿಯ ಹೊರಗೆ ಕುರ್ಚಿಯಲ್ಲಿ ಕೂರಿಸಿ ತನ್ನ ತಾಯಿಯೊಡನೆ ಕೊಠಡಿಯ ಒಳ ಹೋಗಿದ್ದರು. ಸ್ವಲ್ಪ ಸಮಯದ ಬಳಿಕ ಅವರಿಬ್ಬರೂ ಕೊಠಡಿಯ ಹೊರಬಂದು ತಾನು ಕುಳಿತಿದ್ದ ಕುರ್ಚಿಯಲ್ಲಿ ತನ್ನ ತಾಯಿಯನ್ನು ಕೂರಿಸಿದ ಫಿರ್ಯಾದಿಯು ತನ್ನನ್ನು ಕರೆದುಕೊಂಡು ಕಚೇರಿಯ ಹೊರಬಂದರು. ಆ ಹಂತದಲ್ಲಿ ಉಪ ಖಜಾನಾಧಿಕಾರಿಯವರು ತನ್ನಿಂದ ರೂ. 2500/– ಲಂಚದ ಹಣವನ್ನು ಪಡೆದುಕೊಂಡಿದ್ದಾರೆಂದು ತಿಳಿಸಿದರು. ಆದರೆ ಫಿರ್ಯಾದುದಾರರು ಉಪ ಖಜಾನಾಧಿಕಾರಿಗೆ ಲಂಚದ ಹಣ ನೀಡಿರುವುದನ್ನು ತಾನು ನೋಡಿರುವುದಿಲ್ಲ ಹಾಗೂ ಅವರೊಳಗೆ ನಡೆದ ಮಾತುಕತೆಯನ್ನು ನಾನು ಕೇಳಿಸಿಕೊಂಡಿರುವುದಿಲ್ಲ. ಉಪ ಖಜಾನಾಧಿಕಾರಿ ಕೊಠಡಿಯ ಒಳಭಾಗದಲ್ಲಿನ ವಿದ್ಯಮಾನಗಳು ಕಾಣದಂತೆ ಆ ಕೊಠಡಿಯ ಬಾಗಿಲಿಗೆ ಅರ್ಧಭಾಗದಲ್ಲಿ ಅಳವಡಿಸಿದ ಬಾಗಿಲು ಇದೆ ಎಂದು ಒಂದನೆ ಪಂಚರು ಹೇಳುತ್ತಾರೆ.

ಇದಾದ ನಂತರ ಹೊರಗೆ ನಿಲ್ಲಿಸಿದ ಜೀಪ್‌ನಿಂದ ತನಿಖಾ ಕಿಟ್ ತರಿಸಿ ಅದರಿಂದ ಗಾಜಿನ ಬಟ್ಟಲನ್ನು ಹೊರತೆಗೆದು ಭಟ್ಟೀಕರಿಸಿದ ನೀರನ್ನು ಅದಕ್ಕೆ ಹಾಕಿ ತೊಳೆದು ಚೆಲ್ಲಿ ಮತ್ತೆ ಅದರಲ್ಲಿ ಭಟ್ಟೀಕರಿಸಿದ ನೀರನ್ನು ಪಂಚರ ಸಮಕ್ಷಮ ಹಾಕಿ ಸೋಡಿಯಂ ಕಾರ್ಬೋನೇಟ್ ಪುಡಿ ಬೆರೆಸಿ ದ್ರಾವಣ ತಯಾರಿಸಲಾಗಿ ಅದು ಬಣ್ಣ ರಹಿತವಾಗಿರುವುದನ್ನು ಪಂಚರು ಖಾತ್ರಿ ಪಡಿಸಿದ ಬಳಿಕ ಆರೋಪಿ ಶ್ರೀ ವಿ. ವೆಂಕಟ್ರಮಣ ಅವರ ಬಲಗೈ ಹಸ್ತ ಹಾಗೂ ಬೆರಳುಗಳನ್ನು ತೊಳೆಸಲಾಗಿ ಆ ಬಣ್ಣ ರಹಿತ ದ್ರಾವಣವು ನಸು ಗುಲಾಬಿ ಬಣ್ಣಕ್ಕೆ ಬದಲಾಯಿಸುತ್ತದೆ. ಅದನ್ನು ಶುದ್ದವಾದ ಗಾಜಿನ ಬಾಟಲ್‌ನಲ್ಲಿ ಹಾಕಿ ಮುಚ್ಚಳ ಮುಚ್ಚಿ, ಬಟ್ಟೆ ಕಟ್ಟಿ, ಕೇಸಿನ ವಿವರ ನಮೂದಿಸಿ ಆ ಚೀಟಿಯ ಮೇಲೆ ಪಂಚರು, ಫಿರ್ಯಾದಿ ಹಾಗೂ ತನಿಖಾಧಿಕಾರಿ ಸಹಿ ಮಾಡಿದ ನಂತರ ಬಾಟಲಿಗೆ ಅಂಟಿಸಿ ಎರಡನೇ ಪಂಚರಿಂದ ಜೆ ಇಂಗ್ಲೀಷ್ ಅಕ್ಷರದ ಸೀಲ್ ಪಡೆದು ಸೀಲು ಮಾಡಿ ಆರ್ಟಿಕಲ್ ನಂ. 3 ಎಂದು ಗುರುತಿಸಿದರು. ಅದೇ ರೀತಿಯನ್ನು ಅನುಸರಿಸಿ ಇನ್ನೊಂದು ಬಟ್ಟಲಿನಲ್ಲಿ ಆರೋಪಿಯ ಎಡಗೈ ಹಸ್ತ ಮತ್ತು ಬೆರಳುಗಳನ್ನು ತೊಳಿಸಲಾಗಿ ಅದೂ ಸಹ ನಸು ಗುಲಾಬಿ ಬಣ್ಣಕ್ಕೆ ತಿರುಗಿದ್ದು ಅದೇ ರೀತಿ ಪ್ರಕ್ರಿಯೆ ನಂತರ ಆರ್ಟಿಕಲ್ ನಂ. 4 ಎಂದು ಗುರುತಿಸಿದರು.

ತರುವಾಯ ಫಿರ್ಯಾದಿಯಿಂದ ಕೇಳಿ ಪಡೆದುಕೊಂಡ ಅಕ್ರಮ ಸಂಭಾವನೆ ಮೊತ್ತ ರೂ. 2500/– ಬಗ್ಗೆ ಆರೋಪಿಯನ್ನು ತನಿಖಾಧಿಕಾರಿಯು ಕೇಳಿದಾಗ ಆರೋಪಿಯು ತಾನು ಹಾಕಿಕೊಂಡಿರುವ ಷರ್ಟಿನ ಎಡ ಕಿಸೆಯಲ್ಲಿ ಇಟ್ಟಿರುವುದಾಗಿ ತಿಳಿಸುತ್ತಾರೆ. ಅದನ್ನು ಹಾಜರು ಪಡಿಸುವಂತೆ ತಿಳಿಸಿದಾಗ ಆರೋಪಿಯು ತನ್ನ ಷರ್ಟಿನ ಎಡಕಿಸೆಯಿಂದ ತೆಗೆದು ಎರಡನೇ ಪಂಚರಲ್ಲಿ ಹಾಜರುಪಡಿಸುತ್ತಾರೆ. Entrustment ಮಹಜರ್‌ನಲ್ಲಿ ನಮೂದಿಸಿದ ನೋಟುಗಳ ಮೌಲ್ಯ ಹಾಗೂ ಕ್ರಮ ಸಂಖ್ಯೆಯೊಡನೆ ರೂ. 1000/– (8ಸಿಬಿ 878511)ದ ಒಂದು ನೋಟು ರೂ. 500 (4ಸಿಇ 642490, 7ವಿವಿ276997) ದ ಎರಡು ನೋಟುಗಳು ಹೋಲಿಕೆ ಆಗುತ್ತವೆ. ಅವುಗಳನ್ನು ಒಂದು ಎನ್‌ವಲೋಪ್ ನಲ್ಲಿ ಹಾಕಿ ಅಂಟಿಸಿ ಪಂಚರು, ಫಿರ್ಯಾದಿ, ತನಿಖಾಧಿಕಾರಿ ಸಹಿ ಮಾಡಿದ ನಂತರ ಜೆ ಇಂಗ್ಲೀಷ್ ಅಕ್ಷರದಿಂದ ಸೀಲ್ ಮಾಡಿ ಆರ್ಟಿಕಲ್ ನಂ. 5 ಎಂದು ಗುರುತಿಸಲಾಗುತ್ತದೆ.

ಆರೋಪಿಯಿಂದ ರೂ. 2500/– ಪೈಕಿ entrustment ಮಹಜರ್‌ನಲ್ಲಿ ನಮೂದಿಸಿದ ಒಟ್ಟು ರೂ. 2000/– ಅಲ್ಲದೇ ಹೆಚ್ಚಿನ ರೂ. 500/– ಮೌಲ್ಯದ ಒಂದು ನೋಟು ಇರುವ ಬಗ್ಗೆ ಫಿರ್ಯಾದಿಗೆ ವಿಚಾರಿಸಿದಾಗ ಈ ಮೊದಲು ಬೇಡಿಕೆಯೊಡ್ಡಿದ ರೂ. 2000/– ಲಂಚದ ಜೊತೆಗೆ ಇನ್ನೂ ರೂ. 500/– ಗಳನ್ನು ಕೇಳಿದ ಕಾರಣ ಈ ನೋಟನ್ನು ನೀಡಿದ್ದಾಗಿ ಫಿರ್ಯಾದಿಯು ತಿಳಿಸುತ್ತಾರೆ. ಈ ನೋಟಿಗೂ ಸಹ ಫಿನಾಪ್ತಲಿನ್ ಪೌಡರ್ ತಾಕಿರುವ ಸಾಧ್ಯತೆ ಇರುವ ಕಾರಣ ಸದರೀ ರೂ. 500/–ನೋಟನ್ನು (7ಸಿಎಸ್ 520011) ಮುಂದಿನ ತನಿಖೆಗೆ ಸ್ವಾಧೀನ ಪಡಿಸಿಕೊಂಡು ಅದನ್ನು ಎನ್‌ವಲೋಪ್ ನಲ್ಲಿ ಹಾಕಿ ಬಾಯಿ ಅಂಟಿಸಿ ಎಲ್ಲರೂ ಸಹಿ ಮಾಡಿದ ನಂತರ ಜೆ ಇಂಗ್ಲೀಷ್ ಅಕ್ಷರದಿಂದ ಸೀಲ್ ಮಾಡಿ ಆರ್ಟಿಕಲ್ ನಂ. 6 ಎಂದು ನಮೂದಿಸಲಾಯಿತು.

ಇದಾದ ನಂತರ ಆರೋಪಿಗೆ ಬದಲೀ ಷರ್ಟ್ ವ್ಯವಸ್ಥೆ ಮಾಡಿ ಅವರು ತೊಟ್ಟುಕೊಂಡಿದ್ದ ಷರ್ಟಿನ ಎಡಕಿಸೆಯನ್ನು ಗಾಜಿನ ಬಟ್ಟಲಿನಲ್ಲಿ ತಯಾರಿಸಲಾದ ದ್ರಾವಣದಲ್ಲಿ ತೊಳೆಸಲಾಗಿ ಅದು ನಸು ಗುಲಾಬಿ ಬಣ್ಣಕ್ಕೆ ತಿರುಗಿತು. ಆ ದ್ರಾವಣವನ್ನೂ ಸಹ ಗಾಜಿನ ಬಾಟಲ್‌ನಲ್ಲಿ ಹಾಕಿ ಜೆ ಇಂಗ್ಲೀಷ್ ಅಕ್ಷರದಿಂದ ಸೀಲ್ ಮಾಡಿ ಎಲ್ಲರ ಸಹಿಯ ನಂತರ ಆರ್ಟಿಕಲ್ ನಂ. 7 ಎಂದು ಗುರುತಿಸಲಾಗುತ್ತದೆ. ಷರ್ಟ್‌ನ್ನೂ ಸಹ ತನಿಖೆಗಾಗಿ ಅಮಾನತ್ತು ಪಡಿಸಿ ಎಡಜೇಬನ್ನು ಕೆಂಪು ಇಂಕ್‌ನಿಂದ ಗುರುತು ಮಾಡಿ ಒಂದು ದೊಡ್ಡ ಕವರ್‌ನಲ್ಲಿ ಹಾಕಿ ಜೆ ಅಕ್ಷರದಿಂದ ಸೀಲು ಮಾಡಿ ಆರ್ಟಿಕಲ್ 8 ಎಂದು ಗುರುತಿಸಲಾಗುತ್ತದೆ. ದ್ರಾವಣ ತಯಾರಿಸಲು ಬಳಸಿದ ಸೋಡಿಯಂ ಕಾರ್ಬೋನೇಟ್ ಪುಡಿಯ ಮಾದರಿಯನ್ನು ಒಂದು ಬಿಳಿ ಕಾಗದದಲ್ಲಿ ಹಾಕಿ ಪೊಟ್ಟಣ ಕಟ್ಟಿ ಕವರ್ ಮೇಲೆ ಕೇಸಿನ ವಿವರ ಬರೆದು ಎಲ್ಲರ ಸಹಿ ಪಡೆದು ಒಂದು ಕವರ್‌ನಲ್ಲಿ ಹಾಕಿ ಅದನ್ನು ಅಂಟಿಸಿ ಜೆ ಅಕ್ಷರದಿಂದ ಸೀಲ್ ಮಾಡಿ ಆರ್ಟಿಕಲ್ ನಂ. 9 ಎಂದು ಗುರುತಿಸಲಾಯಿತು. ಸೋಡಿಯಂ ಕಾರ್ಬೋನೇಟ್ ದ್ರಾವಣ ತಯಾರಿಸಲು ಬಳಸಿದ ಭಟ್ಟೀಕರಿಸಿದ ನೀರನ್ನು

ಮತ್ತೊಂದು ಬಾಟ್ಲಿಗೆ ಹಾಕಿ ಮೇಲಿನಂತೆಯೇ ಪ್ರಕ್ರಿಯೆ ನಡೆಸಿದ ನಂತರ ಆರ್ಟಿಕಲ್ 10 ಎಂದು ಗುರುತಿಸಲಾಯಿತು. ಅಕ್ರಮ ಸಂಭಾವನೆ ಕೊಡುವ ಸಮಯದಲ್ಲಿ ಆಪಾದಿತ ಅಧಿಕಾರಿಯೊಡನೆ ನಡೆಸಿದ ಸಂಭಾಷಣೆಯನ್ನು ಧ್ವನಿ ಮುದ್ರಿಸಿಕೊಂಡಿರುವಿರಾ ಎಂದು ಫಿರ್ಯಾದಿಯನ್ನು ಕೇಳಿದಾಗ ಹೌದು ಎಂದ ಫಿರ್ಯಾದಿಯು ಐ.ಸಿ. ರೆಕಾರ್ಡರನ್ನು ಹಾಜರುಪಡಿಸುತ್ತಾರೆ. ಅದನ್ನು ಲ್ಯಾಪ್‌ಟಾಪ್ ಕಂಪ್ಯೂಟರ್‌ಗೆ ಅಳವಡಿಸಿ ಎಲ್ಲರ ಸಮಕ್ಷಮ ಕೇಳಲಾಗಿ ಅದರಲ್ಲಿ "ಕೊಡಿ, ಎಷ್ಟು ಸಾರ್, ಅವರು ಹೇಳಿಲ್ವಾ, ಮೊನ್ನೆ ಎಷ್ಟು ಹೇಳಿದ್ದು, ನಾನೇನು ಇದು ಮಾಡ್ಲಿಕ್ಕೆ ಹೋಗುವುದಿಲ್ಲ. ನಿಮ್ಮ ಸೈಡ್ ಹೋದ್ರೆ ಬಿಡುವುದೇ ಇಲ್ಲ. ನಾನು ಚಿತ್ರದುರ್ಗದಲ್ಲಿ ಇದ್ದೆ, ಕಿಸಿಗೆ ಕೈ ಹಾಕಿ ತೊಗೋಳ್ತಾರೆ, ಇನ್ನು ಒಂದು ಕೊಡಿ, ಇನ್ನೊಂದು ಬೇಕಾ ಸಾರ್, ಇದ್ರೆ ಕೊಡಿ ಒಂದು ಐನೂರು ಮತ್ತೆ ಐನೂರು ಬಿಡಿ ಸಾಯಿಲಿ, ಐನೂರು ಉಂಟು ಸಾರ್, ಮತ್ತೆ ಬೇರೆ ಕಡೆ ಹೋಗಲಿಕ್ಕೆ ಉಂಟು ಸಾರ್" ಎಂದು ಆರೋಪಿ ಹಾಗೂ ಫಿರ್ಯಾದಿ ನಡುವೆ ಮಾತುಕತೆ ನಡೆದಿರುತ್ತದೆ. ಅದರಲ್ಲಿ ಫಿರ್ಯಾದಿಯ ಧ್ವನಿಯನ್ನು ಇಬ್ಬರು ಪಂಚ ಸಾಕ್ಷಿಗಳು ಗುರುತಿಸುತ್ತಾರೆ ಹಾಗೂ ಆರೋಪಿಯ ಧ್ವನಿಯನು ಅವರ ಕಚೇರಿಯ ಎರಡನೇ ದರ್ಜೆ ಸಹಾಯಕ ಶ್ರೀ ವಿಶ್ವನಾಥ ಪ್ರಭು ಗುರುತಿಸುತ್ತಾರೆ. ಈ ಸಂಭಾಷಣೆಯ ವಿವರವಾದ ಪಟ್ಟಿಯನ್ನು ಸಿದ್ದಪಡಿಸಿ ಅದಕ್ಕೆ ಇಬ್ಬರು ಪಂಚ ಸಾಕ್ಷಿಗಳು, ಫಿರ್ಯಾದಿ, ಆರೋಪಿ ವಿಶ್ವನಾಥ ಪ್ರಭು ಹಾಗೂ ತನಿಖಾಧಿಕಾರಿ ಸಹಿ ಮಾಡುತ್ತಾರೆ. ಬಳಿಕ ಧ್ವನಿ ಮುದ್ರಿಕೆಯನ್ನು ಲ್ಯಾಪ್‌ಟಾಪ್‌ನಲ್ಲಿ ಉಳಿಸಿಕೊಂಡು ಸಂಭಾಷಣೆಯ 3 ಸಿ.ಡಿ.ಗಳನ್ನು ತಯಾರಿಸಿ ಅದರಲ್ಲಿ ಒಂದನ್ನು ಆರೋಪಿಗೆ ನೀಡಿ ಇನ್ನೊಂದನ್ನು ತನಿಖೆಗಾಗಿ ಇಟ್ಟು ಕೊಂಡು 3ನೇ ಸಿ.ಡಿ. ಯನ್ನು ಎನ್ ವಲೋಪ್ ನಲ್ಲಿ ಹಾಕಿ ಕವರಿನ ಮೇಲೆ ಕೇಸ್‌ನ ವಿವರ ಬರೆದು ಇಬ್ಬರು ಪಂಚರು, ಫಿರ್ಯಾದಿ, ತನಿಖಾಧಿಕಾರಿ ಸಹಿ ಮಾಡಿದ ನಂತರ ಅದನ್ನು ಅಚಿಟಿಸಿ ಜೆ ಅಕ್ಷರದಿಂದ ಸೀಲ್ ಮಾಡಿ ಆರ್ಟಿಕಲ್ ನಂ. 11 ಎಂದು ಗುರುತಿಸಲಾಗುತ್ತದೆ.

ಆನಂತರ entrustment ಮಹಜರ್‌ನಲ್ಲಿ ಕೇಳಿಸಲಾದ ಟ್ರಾಪ್ ಪೂರ್ವದಲ್ಲಿ ಫಿರ್ಯಾದಿಯು ಆರೋಪಿತರ ಕಚೇರಿ ಸಿಬ್ಬಂದಿ ಪ್ರಭು ಎಂಬುವರೊಡನೆ ನಡೆಸಿದ್ದ ಸಂಭಾಷಣೆಯನ್ನು ಮೊಬೈಲ್ ಫೋನ್‌ನಿಂದ ಧ್ವನಿ ಮುದ್ರಿಸಿ ಅದನ್ನು ಸಿ.ಡಿ. ಯಲ್ಲಿ ಕಾಪಿ ಮಾಡಿ ಅದನ್ನು ಲ್ಯಾಪ್‌ಟಾಪ್‌ಗೆ ಅಳವಡಿಸಿ ಕೇಳಿಸಲಾಗಿ ಅದರಲ್ಲಿ "ಸೋಮವಾರ ಬನ್ನಿ. ಅವರು ಒಂದೂವರೆ ಕೇಳಿಯಾರು, ಎರಡು ಕೇಳಿಯಾರು. ಅದು ಅವರು ಎರಡು ಹೇಳಿಯಾರು" ಎಂದಿದ್ದರಲ್ಲಿ ಶ್ರೀ ವಿಶ್ವನಾಥ ಪ್ರಭು ಅವರು ತಮ್ಮ ಧ್ವನಿಯನ್ನು ಗುರುತಿಸಿ ಅದು ತನ್ನದನಿ ಎಂದೇ ನುಡಿದರು. ಅವರ ಹೇಳಿಕೆಯನ್ನು ಪಡೆಯಲಾಯಿತು. ಫಿರ್ಯಾದಿಯ ಧ್ವನಿಯನ್ನು ಇಬ್ಬರು ಪಂಚರು ಗುರುತಿಸಿದರು. ಈ ಸಂಭಾಷಣೆಯ ಪಟ್ಟಿ ತಯಾರಿಸಿ ಅದಕ್ಕೂ ಸಹ ಪಂಚರು, ಫಿರ್ಯಾದಿ, ಆರೋಪಿ, ಸಾಕ್ಷಿ ವಿಶ್ವನಾಥ ಪ್ರಭು ಅವರುಗಳು ಸಹಿ ಮಾಡುತ್ತಾರೆ. ಸಂಭಾಷಣೆಯ 2 ಸಿ.ಡಿ. ತಯಾರಿಸಿ ಒಂದನ್ನು ಆರೋಪಿಗೆ ನೀಡಿ ಇನ್ನೊಂದನ್ನು ತನಿಖೆಗಾಗಿ ಇಟ್ಟುಕೊಂಡು ಮೂಲ ಸಿ.ಡಿ. ಯನ್ನ ಎನ್‌ವಲೋಪ್‌ನಲ್ಲಿ ಹಾಕಿ ಕವರ್ ಮೇಲೆ ಕೇಸ್‌ನ ವಿವರ ಬರೆದು ಇಬ್ಬರು ಪಂಚರು, ಫಿರ್ಯಾದಿ, ತನಿಖಾಧಿಕಾರಿ ಸಹಿ ಹಾಕಿದ ನಂತರ ಕವರನ್ನು ಅಂಟಿಸಿ ಜೆ ಅಕ್ಷರದಿಂದ ಸೀಲ್ ಮಾಡಿ ಅದನ್ನು ಆರ್ಟಿಕಲ್ 12 ಎಂದು ಗುರುತಿಸಲಾಯಿತು.

ತರುವಾಯ ಫಿರ್ಯಾದುದಾರನ ತಾಯಿಯ ಪೆನ್ಷನ್ ಕಡತವನ್ನು ಹಾಜರುಪಡಿಸಲು ಆರೋಪಿಗೆ ಕೇಳಿದಾಗ ಅವರು ಹಾಜರುಪಡಿಸಿದ ಕಡತವನ್ನು ಪರಿಶೀಲಿಸಲಾಗಿ PPO No. 850254 family pension payment order disburser's protion ID 1019000323 ಎಂಬ ಕಡತವಾಗಿದ್ದು ಒಳಗಿನ ಹಾಳೆಯಲ್ಲಿ ಶ್ರೀಮತಿ ನಾಗರತ್ನಮ್ಮನವರ ಫೋಟೋ ಅಂಟಿಸಿದ ಹಾಳೆ ಇತ್ತು ಹಾಗೂ ಅವರ 3 ತಿಂಗಳ ಪೆನ್ಷನ್ ಹಣ ರೂ. 27,219/– ಮೌಲ್ಯದ ಚೆಕ್ ವಿತರಿಸಿದ ಬಗ್ಗೆ ನಮೂದು ಇತ್ತು. ಸದರಿ ಕಡತಕ್ಕೆ ಪಂಚರು ಹಾಗೂ ತನಿಖಾಧಿಕಾರಿಯು ಸಹಿ ಹಾಕಿದ ನಂತರ ಅದರ ಪುಟಗಳನ್ನು ಜೆರಾಕ್ಸ್ ಮಾಡಿಸಿ ಅವುಗಳಿಗೆ 1 ರಿಂದ 12 ರವರೆಗಿನ ಪುಟ ಸಂಖ್ಯೆಗಳನ್ನು ನೀಡಲಾಯಿತು. ನಂತರ ಶ್ರೀಮತಿ ನಾಗರತ್ನಮ್ಮನವರಿಗೆ ಸಂಬಂಧಿಸಿದ ಚೆಕ್‌ನ ಬಗ್ಗೆ ವಿಚಾರಿಸಿದಾಗ ಆರೋಪಿಯು ಸದರೀ ಚೆಕ್‌ಗಳು ಶ್ರೀ ವಿಶ್ವನಾಥಪ್ರಭು ಅವರಲ್ಲಿವೆ ಎಂದು ತಿಳಿಸಲಾಗಿ ಶ್ರೀ ವಿಶ್ವನಾಥಪ್ರಭು ಅವರು ತಮ್ಮ ವಶದಲ್ಲಿದ್ದ ಹಾಗೂ ಶ್ರೀಮತಿ ನಾಗರತ್ನಮ್ಮ ಅವರಿಗೆ ಸಂಬಂಧಿಸಿದ ರೂ. 1,20,000/– ಮೌಲ್ಯದ ಚೆಕ್ ಸಂಖ್ಯೆ ಬಿಪಿ 919187, ರೂ. 27,219/– ಮೌಲ್ಯದ ಚೆಕ್ ಸಂಖ್ಯೆ ಬಿಪಿ 919188 ಹಾಗೂ ರೂ. 1,09,757/– ಮೌಲ್ಯದ ಚೆಕ್ ಸಂಖ್ಯೆ ಬಿಪಿ 919189 ನ್ನು ನೀಡಿದರು. ಸದರೀ ಚೆಕ್‌ಗಳ ಜೆರಾಕ್ಸ್ ಪ್ರತಿ ಮಾಡಿಸಿ ಪ್ರತಿಗಳಿಗೆ ಪಂಚರ ಸಹಿ ಮಾಡಿಸಿ ಮೂಲ ಚೆಕ್‌ಗಳನ್ನು ಶ್ರೀಮತಿ ನಾಗರತ್ನಮ್ಮನವರಿಗೆ ನೀಡಿ, ಆ ರೀತಿ ನೀಡಿದ ಬಗ್ಗೆ ಕಚೇರಿಯ ದಾಖಲೆಯಲ್ಲಿ ನಮೂದಿಸಲಾಗಿ ಸದರೀ ದಾಖಲೆಗಳನ್ನು ಪಂಚಸಾಕ್ಷಿಗಳು ಹಾಗೂ ತನಿಖಾಧಿಕಾರಿ ಸಹಿ ಮಾಡಿದ ನಂತರ ಆ ಹಾಳೆಯನ್ನು ಜೆರಾಕ್ಸ್ ಮಾಡಿ ಸ್ವಾಧೀನ ಪಡಿಸಿಕೊಳ್ಳಲಾಯಿತು. ಹಾಗೆಯೇ ಕಚೇರಿಯ ಡಿಸೆಂಬರ್, 2010 ಹಾಜರಾತಿ ಪುಸ್ತಕ ಪರಿಶೀಲಿಸಲಾಗಿ ದಿನಾಂಕ : 13–12–2010ರ ಹಾಜರಾತಿಗೆ ಆರೋಪಿತರು ಸಹಿ ಮಾಡಿದ್ದು ಆ ಹಾಳೆಯನ್ನು ಪಂಚರು ಹಾಗೂ ತನಿಖಾಧಿಕಾರಿ ಸಹಿ ಹಾಕಿ ನಂತರ ಜೆರಾಕ್ಸ್ ಮಾಡಿ ಸ್ವಾಧೀನ ಪಡಿಸಿಕೊಳ್ಳಲಾಯಿತು.

ತರುವಾಯ ಆರೋಪಿಯು ಸ್ವಇಚ್ಛಾ ಹೇಳಿಕೆ ನೀಡಿ ಪಿಂಚಣಿಗೆ ಬಂದವರು ಉದ್ದೇಶ ಪೂರ್ವಕವಾಗಿ ತಮ್ಮನ್ನು ಟ್ರಾಪ್ ಮಾಡಿಸಿದ್ದಾರೆಂದೂ ತಾನು ಯಾವ ತಪ್ಪೂ ಮಾಡಿಲ್ಲವೆಂದೂ ಲಿಖಿತವಾಗಿ ತಿಳಿಸಿದರು. ಅದನ್ನು ನೋಡಿದ ಫಿರ್ಯಾದಿಯು ತನ್ನ ತಾಯಿಗೆ ಸಿಗಬೇಕಾದ ಪೆನ್ಷನ್ ಮತ್ತು ಜಿಪಿಎಫ್ ಹಣಕ್ಕಾಗಿ ಆರೋಪಿಯು ರೂ. 2000/– ಲಂಚಕ್ಕೆ ಬೇಡಿಕೆಯೊಡ್ಡಿ ಅದರಂತೆ ಆ ದಿನ ನೀಡಲು ಹೋದಾಗ ಇನ್ನೂ ಹೆಚ್ಚಿನ ರೂ. 500/– ಅಂದರೆ ಒಟ್ಟು ರೂ. 2,500/– ಲಂಚದ ಹಣ ಪಡೆದಿರುತ್ತಾರೆ. ಆರೋಪಿಯ ಸಮಜಾಯಿಷಿ ಸರಿಯಲ್ಲವೆಂದು ತಿಳಿಸಿದರು. ಇವೆರಡೂ ಹೇಳಿಕೆಗಳ ಬಗ್ಗೆ ಒಂದನೇ ಪಂಚರನ್ನು ಕೇಳಲಾಗಿ ಆರೋಪಿತರು ಫಿರ್ಯಾದಿದಾರರಿಂದ ರೂ. 2500/– ಲಂಚದ ಹಣವನ್ನು ಪಡೆದಿರುವುದು, ಅದರ ಬಳಿಕ ಪೊಲೀಸು ನಿರೀಕ್ಷಕರು ಶ್ರೀ ವಿಶ್ವನಾಥ ಪ್ರಭು ಅವರಿಂದ ಚೆಕ್ಕನ್ನು ಪಡೆದು ಫಿರ್ಯಾದಿದಾರರ ತಾಯಿಗೆ ನೀಡಿರುವುದರಿಂದ ಆಪಾದಿತರು ಅಕ್ರಮ ಹಣವನ್ನು ಪಡೆಯುವ ಸಲುವಾಗಿಯೇ ಚೆಕ್ಕನ್ನು ಇಟ್ಟುಕೊಂಡಿದ್ದು ಆತನು ನೀಡಿದ ಲಿಖಿತ ಹೇಳಿಕೆ ಸತ್ಯಕ್ಕೆ ದೂರವಾಗಿದೆ ಎಂದು ತಿಳಿಸಿದ್ದಾರೆ. ಇದರ ನಂತರ 1 ರಿಂದ 12 ರವರೆಗಿನ ಆರ್ಟಿಕಲ್‌ಗಳನ್ನು ಸೀಲ್ ಮಾಡಲು ಉಪಯೋಗಿಸಿದ್ದ ಜೆ ಇಂಗ್ಲೀಷ್ ಅಕ್ಷರದ ಸೀಲಿನ 4 ಮಾದರಿ ಸೀಲ್‌ಗಳನ್ನು ತಯಾರಿಸಿ ಅದರ ಮೇಲೆ ಪಂಚ ಸಾಕ್ಷಿದಾರರು, ತನಿಖಾಧಿಕಾರಿ ಹಾಗೂ ಫಿರ್ಯಾದಿ ಸಹಿ ಮಾಡಿದ ನಂತರ ಜೆ ಅಕ್ಷರದ ಸೀಲನ್ನು ಎರಡನೇ ಪಂಚ ಸಾಕ್ಷಿ ಟಿ. ಚಂದ್ರಹಾಸ ಅವರಿಗೆ ಕೊಟ್ಟು ಮುಂದೆ ವಿಚಾರಣೆ ವೇಳೆಯಲ್ಲಿ ನ್ಯಾಯಾಲಯಕ್ಕೆ ಹಾಜರುಪಡಿಸಲು ತಿಳಿಸಲಾಯಿತು ಹಾಗೂ ಅವರಿಂದ ಸ್ವೀಕೃತಿ ಪಡೆದುಕೊಳ್ಳಲಾಯಿತು.

ಇದಾದ ನಂತರ entrustment ಮಹಜರ್ ಸಮಯದಲ್ಲಿ ನಮೂದಿಸಿದ ಹಾಗೂ 2ನೇ ಪಂಚ ಸಾಕ್ಷಿಗೇ ನೀಡಿದ್ದ ನೋಟುಗಳ ಮೌಲ್ಯ, ಕ್ರಮ ಸಂಖ್ಯೆ ಒಳಗೊಂಡ ಬಿಳಿಹಾಳೆಯನ್ನು ಅವರಿಂದ ಪಡೆದು ಪಂಚ ಸಾಕ್ಷಿಗಳು ಹಾಗೂ ತನಿಖಾಧಿಕಾರಿಯು ಅದಕ್ಕೆ ಸಹಿ ಹಾಕಿದ ನಂತರ ಪ್ರಕರಣದ ಕಡತಕ್ಕೆ ತನಿಖಾಧಿಕಾರಿಯು ಸೇರಿಸಿದರು. ಈ ಸ್ವತ್ತು ಸ್ವಾಧೀನತಾ ಮಹಜರು ಸಮಯದ ಫೋಟೋಗಳನ್ನು ತನಿಖಾಧಿಕಾರಿಯ

ಸೂಚನೆಯಂತೆ ತೆಗಸಲಾಯಿತು. ನಂತರ ತನಿಖಾಧಿಕಾರಿಯು ತಕ್ಷೀರು ಸ್ಥಳದ ಕಚ್ಚಾ ನಕ್ಷೆಯನ್ನು ತಯಾರಿಸಿದರು. ಈ ಸೊತ್ತು ಸ್ವಾಧೀನತಾ ಮಹಜರನ್ನು ಆರೋಪಿತರ ಕಛೇರಿಯಲ್ಲೇ ಲ್ಯಾಪ್‌ಟಾಪ್ ಮೂಲಕ ಎಲ್ಲಾ ಪಂಚರ ಸಮಕ್ಷಮದಲ್ಲಿ ತನಿಖಾಧಿಕಾರಿಯ ಉಕ್ತಲೇಖನದ ಮೇರೆಗೆ ಪೊಲೀಸು ಸಿಬ್ಬಂದಿ ಶ್ರೀ ಶಶಿಧರ್, ಪಿ.ಸಿ. ಅವರು ಮದ್ಯಾಹ್ನ 2.45 ರಿಂದ ಸಂಜೆ 6–30 ರವರೆಗೆ ತಯಾರಿಸಿ ಪೊಲೀಸರು ತಂದಿದ್ದ ಪ್ರಿಂಟರ್‌ನಲ್ಲಿ ಪ್ರಿಂಟ್ ಔಟ್ ತೆಗೆಸಿ ಪಂಚರ ಸಹಿ, ಶ್ರೀ ವಿಶ್ವನಾಥಪ್ರಭು ಸಹಿ, ತನಿಖಾಧಿಕಾರಿಯ ಸಹಿ ಆದ ನಂತರ ಅದರ ಪ್ರತಿಯನ್ನು ಆರೋಪಿಗೆ ನೀಡಿ ಅವರ ಸಹಿಯನ್ನು ಪಡೆಯಲಾಯಿತು.

ಮೇಲಿನ ಬೆಳವಣಿಗೆಗಳನ್ನು ಪರಿಶೀಸಲಾಗಿ, ಈ ಪ್ರಕರಣದಲ್ಲಿ ದೂರು ಅರ್ಜಿ ಸಲ್ಲಿಕೆ, ಇಬ್ಬರು ಪಂಚ ಸಾಕ್ಷಿಗಳು, entrustment ಮಹಜರ್, ಸ್ವಾಧೀನತಾ ಮಹಜರ್, ಎಲ್ಲರ ಹೇಳಿಕೆಗಳು, ತತ್ಸಂಬಂಧಿ ಕಾಗದ ಪತ್ರಗಳು ಇವುಗಳನ್ನು ಪರಿಶೀಲಿಸಲಾಗಿ ಎಲ್ಲವೂ ಸಮರ್ಪಕವಾಗಿ ಕಾನೂನು ರೀತಿಯಾಗಿಯೇ ಜರುಗಿವೆ. ಇದರ ಹೊರತಾಗಿಯೂ ಈ ಕೆಳಕಂಡ ಅಂಶಗಳು ಪ್ರಾಸಿಕ್ಯೂಷನ್‌ಗೆ ಪ್ರತಿಕೂಲವಾಗಿವೆ.

1. ಈ ಟ್ರ್ಯಾಪ್‌ಗೆ ಸಂಬಂಧಿಸಿದಂತೆ ಆರೋಪಿ ಶ್ರೀ ವೆಂಕಟರಮಣ ಅವರು ಫಿರ್ಯಾದುದಾರರೊಡನೆ ಆಗಲೀ, ಅವರ ತಾಯಿಯೊಡನೆ ಆಗಲೀ ಮುಖತಃ ಇಲ್ಲವೇ ದೂರವಾಣಿಯಲ್ಲಿ ನೇರ ಮಾತುಕತೆ ನಡೆಸಿಲ್ಲ.

2. ಎಲ್ಲಾ ಮಾತುಕತೆಯ ಉಪ ಖಜಾನೆಯ ದ್ವಿತೀಯ ದರ್ಜೆ ಸಹಾಯಕರಾದ ಶ್ರೀ ವಿಶ್ವನಾಥ ಪ್ರಭು ಎಂಬುವರ ಮೂಲಕ ನಡೆದಿದೆ.

3. ಒಂದನೆ ಪಂಚ ಸಾಕ್ಷಿಯು ಫಿರ್ಯಾದಿ ಹಾಗೂ ಅವರ ತಾಯಿಯೊಡನೆ ಆರೋಪಿಯ ಕೊಠಡಿಯೊಳಗೆ ಹೋಗಿಲ್ಲ. ಅಲ್ಲಿನ ಸಂಭಾಷಣೆಯನ್ನು ಕೇಳಿಸಿಕೊಂಡಿಲ್ಲ. ಫಿರ್ಯಾದಿ ಅಕ್ರಮ ಸಂಭಾವನೆ ನೀಡಿದ್ದನ್ನು ಹಾಗೂ ಆರೋಪಿಯು ಅದನ್ನು ಪಡೆದಿದ್ದನ್ನು ನೋಡಿಲ್ಲ.

ಆದರೆ ಪ್ರಾಸಿಕ್ಯೂಷನ್ ಪರವಾಗಿ ಈ ಕೆಳಕಂಡ ಅಂಶಗಳು ನಿಲ್ಲುತ್ತವೆ.

(ಅ) ಆರೋಪಿಯಿಂದ ಒಟ್ಟು ರೂ. 2500/– ಗಳನ್ನು ವಶಪಡಿಸಿಕೊಳ್ಳಲಾಗಿದೆ.

(ಆ) ಈ ಮೊತ್ತವು ದಾಳಿ ಪೂರ್ವ ಮಹಜರ್‌ನಲ್ಲಿ ಗುರುತಿಸಿ ಫಿನಾಪ್ತಲಿನ್ ಪೌಡರ್ ಲೇಪಿಸಿ ನೀಡಲಾಗಿದ್ದ ರೂ. 500/– ಮುಖ ಬೆಲೆಯ 03 ನೋಟುಗಳು ಹಾಗೂ ರೂ. 1000/– ಮುಖ ಬೆಲೆಯ 01 ನೋಟುಗಳಾಗಿದ್ದು ನೋಟಿನ ಮೇಲಿನ ಸಂಖ್ಯೆಗಳು ಹೋಲಿಕೆಯಾಗುತ್ತವೆ.

(ಇ) ಆರೋಪಿಯ ಕೈಗಳು, ಷರ್ಟಿನ ಜೇಬುಗಳನ್ನು ತೊಳೆದಾಗ ಅವು ಗುಲಾಬಿ ಬಣ್ಣಕ್ಕೆ ತಿರುಗಿವೆ.

(ಈ) ಅಕ್ರಮ ಸಂಭಾವನೆ ಪಡೆಯುವಾಗ ಫಿರ್ಯಾದಿ, ಆರೋಪಿ ಹಾಗೂ ವಿಶ್ವನಾಥ ಪ್ರಭು ಅವರುಗಳ ನಡುವೆ ನಡೆದ ಸಂಭಾಷಣೆ record ಆಗಿದೆ.

(ಉ) ಟ್ರಾಪ್ ನಂತರ ರೂ. 1,20,000/–, ರೂ. 1.09,757/– ಹಾಗೂ ರೂ. 27,219/– ಗಳ ಮೌಲ್ಯದ 03 ಚೆಕ್‌ಗಳು ವಿಶ್ವನಾಥ ಪ್ರಭು ಅವರಲ್ಲಿವೆ ಎಂದು ಆರೋಪಿಯು ತಿಳಿಸಿದ್ದು, ಅದರ ಮೇಲೆ ವಿಶ್ವನಾಥ ಪ್ರಭು ಅವರು ಚೆಕ್‌ಗಳನ್ನು ಫಿರ್ಯಾದಿಯ ತಾಯಿಯವರಿಗೆ ನೀಡಿ ಕಚೇರಿಯ ದಾಖಲೆಯಲ್ಲಿ ನಮೂದಿಸಿದ್ದಾರೆ.

ಮೇಲಿನ ಅಂಶಗಳೇ ಅಲ್ಲದೆ, ಫಿರ್ಯಾದುದಾರರು ಟ್ರ್ಯಾಪ್ ನಂತರ ದಿನಾಂಕ : 14–12–2010ರಂದು ನೀಡಿದ ಲಿಖಿತ ಹೇಳಿಕೆಯನ್ನು ತಿಳಿಸಿರುವಂತೆ ಆರೋಪಿಯು ಅವರಿಂದ ಈ ಹಿಂದೆಯೇ ಸಮೂಹ ವಿಮಾ ಮೊತ್ತದ ಚೆಕ್ ನೀಡಲು ರೂ. 1500/–ಗಳ ಅಕ್ರಮ ಸಂಭಾವನೆ ಪಡೆದಿದ್ದರು.

ಮುಂದುವರಿದಂತೆ ಉಪ ಖಜಾನೆಯ ದ್ವಿತೀಯ ದರ್ಜೆ ಸಹಾಯಕ ಶ್ರೀ ವಿಶ್ವನಾಥಪ್ರಭು ಅವರು ಟ್ರ್ಯಾಪ್ ನಂತರ ದಿನಾಂಕ : 13–12–2010 ರಂದು ನೀಡಿದ ಲಿಖಿತ ಹೇಳಿಕೆಯಂತೆ ಆರೋಪಿ ಶ್ರೀ ವೆಂಕಟರಮಣ ಅವರು ಹಿಂದಿನಿಂದಲೂ ಫಲಾನುಭವಿಗಳಿಂದ ಲಂಚದ ಹಣ ಪಡೆದ ನಂತರವೇ ಅವರುಗಳಿಗೆ ಚೆಕ್ ವಿತರಿಸುತ್ತಿದ್ದರು. ಈ ಪ್ರಕರಣದಲ್ಲಿಯೂ ಸಹ ಆರೋಪಿಯ ಸೂಚನೆ ಮೇರೆಗೆ ಕಚೇರಿಗೆ ಚೆಕ್ ಬಂದಿರುವ ವಿಷಯವನ್ನು ಫಿರ್ಯಾದಿಗೆ ತಾನೇ ತಿಳಿಸಿದ್ದರು.

ಮೇಲಿನ ಅಂಶಗಳಿಂದಾಗಿ ಈ ಪ್ರಕರಣದಲ್ಲಿ ಶ್ರೀ ವಿ. ವೆಂಕಟರಮಣ, ಪತ್ರಾಂಕಿತ ಉಪ ಖಜಾನಾಧಿಕಾರಿ, ಖಜಾನೆ ಇಲಾಖೆ ಅವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಹೂಡಲು ಸಾಕಷ್ಟು ಆಧಾರಗಳಿರುವುದು ಕಂಡು ಬಂದಿರುವುದನ್ನು ಮನಗಂಡ ಸರ್ಕಾರವು ಕ್ರಿಮಿನಲ್ ಮೊಕದ್ದಮೆ ಹೂಡಲು ಸಾಕಷ್ಟು ಆಧಾರಗಳು ಕಂಡುಬಂದಿರುವುದನ್ನು ಪರಿಗಣಿಸಿದ ಸರ್ಕಾರವು ಅನುಮತಿ ನೀಡಲು ನಿರ್ಧರಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರ ಆದೇಶ ಸಂಖ್ಯೆ : ಆಇ 07 ಆಖಇ 2011, ಬೆಂಗಳೂರು, ದಿನಾಂಕ : 17–11–2011.**

ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 19(1) (ಬಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿದ ಸರ್ಕಾರವು ಶ್ರೀ ವಿ. ವೆಂಕಟರಮಣ, ಪತ್ರಾಂಕಿತ ಉಪ ಖಜಾನಾಧಿಕಾರಿ, ಖಜಾನೆ ಇಲಾಖೆ ಅವರ ವಿರುದ್ಧ ಅದೇ ಕಾಯ್ದೆಯ ಕಲಂ 7, 13(1(ಡಿ) ರೊಂದಿಗೆ ಓದಿಕೊಂಡಂತೆ 13(2)ರ ಅಡಿಯಲ್ಲಿ ಎಸಗಿದ ಆರೋಪಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲು ಕರ್ನಾಟಕ ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಮಂಜೂರಾತಿ ನೀಡುತ್ತದೆ.

ಇದರಿಂದಾಗಿ ಈ ಹಿಂದೆ ದಿನಾಂಕ : 20–9–2011ರ ಸರ್ಕಾರಿ ಆದೇಶದಲ್ಲಿ ನೀಡಲಾದ ಮಂಜೂರಾತಿ ಮೇಲಿನಂತೆ ಪರಿಷ್ಕೃತಗೊಂಡಿರುತ್ತದೆ.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು 1977ರ ನಿಯಮ 19(1)ರನ್ವಯ ಈ ಆದೇಶವನ್ನು ನನ್ನ ಕಚೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ : 17ನೇ ನವೆಂಬರ್ 2011ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 2779

ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ).